# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'

ಸಂಚಾಲಕರು: ನಾಗಿರೆಡ್ಡಿ

---

ಮನುಷ್ಯರಿಗೆ ಆತುರಭಾವವು ಉತ್ಸಾಹಕ್ಕೆ ಎಷ್ಟು ಬೇಕೋ ಅಷ್ಟರಮಟ್ಟಿಗೆ ಇದ್ದರೆ ಅಭಿವೃದ್ಧಿಗೇರುತ್ತಾ ಬರುತ್ತಾರೆ. ಆಯಾ ಕಾಲಕ್ಕೆ ಬರತಕ್ಕದ್ದು ಆಯಾ ಕಾಲಕ್ಕೆ ಬಂದರೇನೇ ಅನುಭವಿಸಿ ಕೊಂಡು ಜೀವಿಸಲು ಸಾಧ್ಯ. ಮುಂದೆ ಅನುಭವಿಸಲಿರುವುದನ್ನು ಇಂದೇ ಅನುಭವಿಸಿದರೆ ಮುಂದಕ್ಕೆ ಶೂನ್ಯತಾನೆ ? ಆದುದರಿಂದ ಯಾವ ಕಾರ್ಯವನ್ನು ಸಾಧಿಸಬೇಕಾದರೂ ಸಹನೆಯೂ, ಹಟವೂ ಇರಬೇಕು. ಈ ದಿವ್ಯ ಸಂದೇಶವನ್ನು ನಮಗೆ ತೋರಿಸುವವನು ಈ ಸಂಚಿಕೆಯ ಕಡೆಯ ಕಥೆಯ "ಆತುರದ ಶಿಷ್ಯ."

## ಅಮರವಾಣಿ

ಪರಾನ್ ತೋಷಯಿತು ಧಾರ್ತುಃ ನ ಕದಾಪಿ ಧನಕ್ಷಯಃ
ಉದ್ಧೃತೇಪಿ ನದೀ ಕೂಪಾತ್ ಜಲೇ ತಸ್ಯ ನ ಹಿ ಕ್ಷಯಃ

ಇತರರಿಗೆ ದಾನಮಾಡಿದ ಮಾತ್ರಕ್ಕೆ ದಾತನಿಗೆ ಸಂಪತ್ತು ಕರಗಿ ಹೋಗದು. ಬಾವಿಯ ನೀರನ್ನು ಸೇದುತ್ತಿದ್ದರೆ ಒಸರಿ ಕೊಂಡಿರುತ್ತದೆಯೇ ಹೊರತು ಒಣಗಿಹೋಗಲಾರದಷ್ಟೆ!

---

ಸಂಪುಟ: ೭೪ ಫೆಬ್ರುವರಿ '೮೫ ಸಂಚಿಕೆ: ೨

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



# ಚಂದಮಾಮನ ಹರಟೆ

## ಮೊದಲನೇ ರಾಷ್ಟ್ರಪತಿಯ ಶತ ಜಯಂತಿ



ಸ್ವತಂತ್ರ ಭಾರತ ದೇಶದ ಪ್ರಥಮ ಅಧ್ಯಕ್ಷರಾದ ಬಾಬು ರಾಜೇಂದ್ರ ಪ್ರಸಾದ್ ೧೮೮೪ ನೇ ಸಂವತ್ಸರದಲ್ಲಿ ಬೀಹಾರಿನಲ್ಲಿ ಜನಿಸಿದರು. ೧೯೮೪ ಅವರ ಶತಜಯಂತೀ ಸಂವತ್ಸರ. ಚೆನ್ನಾಗಿ ಸಾಗುತ್ತಿದ್ದ ನ್ಯಾಯವಾದ ವೃತ್ತಿಯನ್ನು ತ್ಯಾಗಮಾಡಿ, ಅವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗ ವಹಿಸಿದರು. ಮೂರು ಸಾರಿ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾದರು. ಸ್ವಾತಂತ್ರ್ಯಾನಂತರ ೧೯೫೦ ನೇ ಸಂವತ್ಸರದಲ್ಲಿ ದೇಶಕ್ಕೆ ಅಧ್ಯಕ್ಷರಾದರು. ೧೯೫೨ ರಲ್ಲಿಯೂ ೧೯೫೭ ರಲ್ಲಿಯೂ ಮತ್ತೆ ಅದೇ ಪದವಿಗೆ ಆರಿಸಲ್ಪಟ್ಟರು.

## ಪ್ರಪಂಚದೊಳಗೆಲ್ಲಾ ದೊಡ್ಡ ಕೇಕ್



ಕೆನಡಾದ ವೈಗೇಟಿಗೆ ಸೇರಿದ ಜಿಮ್ ಹಿಲ್ಬನ್ ಎಂಬವನು ಪ್ರಪಂಚದೊಳಗೆಲ್ಲಾ ದೊಡ್ಡದೆನಿಸುವ ಕೇಕ್ ತಯಾರಿಸಿದನು. ೪೦೦ ಕಿ. ಗ್ರಾಂ ಭಾರವಾದ ಈ ಕೇಕ್ ತಯಾರಿಸಲು ಅವನು ಸಿಮೆಂಟ್ ಮಿಕ್ಸರ್, ಕ್ರೇನ್ ಮೊದಲಾದ ಪರಿಕರಗಳನ್ನು ಉಪಯೋಗಿಸಬೇಕಾಗಿ ಬಂತು. ಆ ಕೇಕನ್ನು ಎರಡು ಸಾವಿರ ಜನರು ತಿಂದರು. ಇದಕ್ಕೆ ಮೊದಲು ಜಿಮ್ ಹಿಲ್ಬನ್ ಪ್ರಪಂಚದೊಳಗೇ ದೊಡ್ಡದಾದ ಐಸ್‌ಕ್ರೀಮ್ ಕೂಡಾ ತಯಾರಿಸಿದ್ದನು.

## ಕಲಿಯುವಿಕೆ ಯಾವಾಗ ಮೊದಲಾಗುತ್ತದೆ ?



ಮಾತೃಗರ್ಭದಲ್ಲಿರುವಾಗಲೇ ಶಿಶು ಕಲಿಯಲು ಪ್ರಾರಂಭಿಸುತ್ತದೆಂದು ಅಮೇರಿಕಾಕ್ಕೆ ಸೇರಿದ ಶಾಸ್ತ್ರವೇತ್ತರು ಹೇಳುತ್ತಾರೆ. ಈ ಸಿದ್ಧಾಂತದ ಪ್ರಕಾರ ನಮ್ಮ ಮಹಾಭಾರತ ಕಥೆಯಲ್ಲಿ ಅಭಿಮನ್ಯು ತಾಯಿ ಸುಭದ್ರೆಯ ಹೊಟ್ಟೆಯೊಳಗಿರುವಾಗಲೇ, ತಂದೆ ಅರ್ಜುನನು ತಾಯಿಗೆ ತಿಳಿ ಹೇಳಿದ ಯುದ್ಧ ವಿದ್ಯೆಗಳನ್ನು ಕುರಿತು ಕೇಳಿ ಕಲಿತುಕೊಂಡನೆಂದರೆ ಆಶ್ಚರ್ಯ ವಿಲ್ಲವಷ್ಟೇ ?

# ನಿಮಗೆ ಗೊತ್ತೇ?

೧. ಐಕ್ಯರಾಜ್ಯ ಸಮಿತಿಯ ಪ್ರಥಮ ಸಮಾವೇಶವು ಯಾವಾಗ ಎಲ್ಲಿ ನಡೆಯಿತೆಂದು ನಿಮಗೆ ಗೊತ್ತೇ?

೨. ಕನಿಷ್ಕನ ರಾಜಧಾನೀ ನಗರವಾದ ಪುರುಷ್‌ಪುರ್ ಯಾವ ಹೆಸರಿನಿಂದ ಪ್ರಸಿದ್ಧವಾಯಿತು ?

೩. ಕಾಂಚೀಪುರವು ರಾಜಧಾನಿಯಾಗಿ, ದಕ್ಷಿಣ ಭಾರತವನ್ನು ಪರಿಪಾಲಿಸಿದ ರಾಜರು ಯಾರು ?

೪. ಢಿಲ್ಲೀ ನಗರ ನಿರ್ಮಾಣಕ್ಕೂ, ಹೆಸರಿಗೂ ಸಂಬಂಧ ವಿರುವ ಮೌರ್ಯಪಾಲಕನು ಯಾರೆಂದು ನಿಮಗೆ ತಿಳಿದಿದೆಯೇ ?

೫. ಸುಲ್ತಾನ್ ಸಿಕಂದರ್ ಷಾ ಲೋಡೀ ನಿರ್ಮಿಸಿದ ಸುಪ್ರಸಿದ್ಧ ನಗರವು ಯಾವುದೆಂದು ನೀವು ಬಲ್ಲಿರಾ ?

(ಉತ್ತರ ೬೪ ನೇ ಪುಟದಲ್ಲಿ)



# ಮೇಕೆ-ಮೇವು

ಕೀಳೂರಿನ ಗೋವಿಂದಯ್ಯ ಚಿಕ್ಕಂದಿನಿಂದಲೂ ಬಹಳ ಕಷ್ಟಪಟ್ಟರು. ಸೊಂಟ ಬಗ್ಗಿಸಿ, ಕೈಕಾಲಾಡಿಸಿ ಬೆವರಿಳಿಸಿ ಸಂಪಾದನೆ ಮಾಡಿಕೊಂಡಿದ್ದವರು. ಅಂತಲೇ ಖರ್ಚು ಮಾಡುವಾಗ ಅಗತ್ಯವೋ ಅನಗತ್ಯವೋ ಎಂದು ಒಂದಕ್ಕೆರಡು ಸಾರಿ ಯೋಚಿಸಿ ಖರ್ಚು ಮಾಡುವರು. ಎಲ್ಲರೂ ಅವರನ್ನು ಹದ್ದಿನ ಗೋವಿಂದಯ್ಯ ಎಂದು ಕರೆಯುತ್ತಿದ್ದರು.

ಈಗ ಗೋವಿಂದಯ್ಯಗೆ ಅರವತ್ತು ವರ್ಷ ಪ್ರಾಯ ದಾಟಿತ್ತು. ಆದರೂ ಅವರು ತಮ್ಮ ಕೆಲಸಗಳನ್ನು ಇನ್ನೊಬ್ಬರ ಮೇಲೆ ಹಾಕದೆ ಸ್ವಯಂ ತಾನೇ ಮಾಡಿಕೊಳ್ಳುವರು. ಅವರ ಹೆಂಡತಿಯೂ ಅವರ ಹಾಗಿನವಳೇ.

ಆದರೆ ಅವರಿಗಿರುವ ಮೂರು ಜನ ಗಂಡು ಮಕ್ಕಳೂ ಅವರಿಗೆ ತದ್ವಿರುದ್ಧರಾಗಿದ್ದರು. ಚಿಕ್ಕಂದಿನಿಂದಲೂ ಪರಮ ಸೋಮಾರಿಗಳಾಗಿಯೇ ಬೆಳೆದರು. ತಂದೆ ಹೇಳುವ ಮಾತು ಕೇಳುತ್ತಿರಲಿಲ್ಲ.

ಕಷ್ಟಾಳಾಗಿಯೇ ಬದುಕಿದ ಗೋವಿಂದಯ್ಯನಿಗೆ ಇಪ್ಪತ್ತು ಎಕರೆಗಳಷ್ಟು ಹೊಲಗದ್ದೆಗಳಿದ್ದುವು. ಇತ್ತೀಚೆಗೆ ಹತ್ತಿರವೇ ಇದ್ದು ವ್ಯವಸಾಯ ನೋಡಿಕೊಳ್ಳುವ ತ್ರಾಣವಿಲ್ಲದೆ ಗೋವಿಂದಯ್ಯ ಮಗಂದಿರ ಸಹಾಯ ಕೇಳಿದರು. ಅವರಿಗೆ ದಿನಾ ಹೊಲಗದ್ದೆಗಳಿಗೆ ಹೋಗುವುದೂ ಕೆಸರು ನೀರಿಗಿಳಿಯುವುದೂ ಬಹಳ ಶ್ರಮವೆನಿಸಿತು. ಅವರು ತಮ್ಮ ಮೇಲೆ ಬಿದ್ದ ಕೆಲಸಗಳಿಗೆ ಇನ್ನೊಬ್ಬ ರೈತನನ್ನು ನಿಯಮಿಸಿ, ಅವನಿಗೆ ಅದರ ಜವಾಬ್ದಾರಿ ಕೂಡಾ ಒಪ್ಪಿಸಿದರು. ಆ ರೈತನು ಬೆಳೆದ ಬೆಳೆಗಳ ಬಹಳ ಪಾಲು ತಾನೇ ಇಟ್ಟುಕೊಂಡು, ತನಗೆ ತೋರಿದಷ್ಟು ತಂದು ಗೋವಿಂದಯ್ಯನಿಗೆ ಕೊಡುತ್ತಿದ್ದನು. ಬೆಳೆ ಕಡಿಮೆಯಾದದುಕ್ಕೆ ಏನೇನೋ ಕಾರಣಗಳನ್ನೂ ಹೇಳುವನು.

ಗೋವಿಂದಯ್ಯನಿಗೆ ಬಡ್ಡೀ ಲೇವಾದೇವಿಯೂ ಇದ್ದಿತು. ಅದನ್ನು ಕೂಡಾ ತಾನೇ ನೋಡಿಕೊಳ್ಳಲು ಸಾಧ್ಯವಾಗದೆ, ಬೇರೊಬ್ಬ ಗುಮಾಸ್ತನನ್ನು ಇಟ್ಟುಕೊಳ್ಳಬೇಕಾಗಿ ಬಂತು. ಹಾಗೆಯೇ ಗೋವಿಂದಯ್ಯ ತಮಗಿರುವ ಜವುಳೀ ಅಂಗಡಿಯನ್ನು ಕೂಡಾ ಪರಿಚಿತನೊಬ್ಬನಿಗೆ ಒಪ್ಪಿಸಿಕೊಟ್ಟು, ಅವನು ಕೊಡುವ ಲಾಭವನ್ನು ತಾವು ತೆಗೆದುಕೊಳ್ಳತೊಡಗಿದರು. ಆ ಮೂರು ಕೆಲಸಗಳನ್ನೂ ತನ್ನ ಮೂವರು



ಮಗಂದಿರು ನೋಡಿಕೊಳ್ಳುತ್ತಿದ್ದರೆ ಲಾಭವೂ ಬರುತ್ತಿತ್ತು, ನಿಶ್ಚಿಂತೆಯೂ ಇರುತ್ತಿತ್ತು, ಆದರೆ ಮಗಂದಿರಿಗೆ ಹಣ ಖರ್ಚು ಮಾಡಲಿಕ್ಕೆ ಗೊತ್ತಿತ್ತೇ ಹೊರತು ಮತ್ತೊಂದು ಕೆಲಸದ ಮೇಲೆ ಧ್ಯಾನವಿರಲಿಲ್ಲ. ಈ ಚಿಂತೆ ಗೋವಿಂದಯ್ಯನಲ್ಲಿ ದಿಗಿಲಾಗಿ ಮಾರ್ಪಟ್ಟಿತು.

ಗೋವಿಂದಯ್ಯನ ಮನೆಯ ಆವರಣವು ಬಹಳ ದೊಡ್ಡದಾಗಿತ್ತು. ಹೊರಗಿನ ಕೆಲಸಗಳನ್ನೆಲ್ಲ ಬಿಟ್ಟು ಗೋವಿಂದಯ್ಯ ಮನೆಯಲ್ಲೇ ಸುಮ್ಮನಿರುವಾಗ, ಹೊತ್ತು ಹಾಳುಮಾಡಲು ಸಾಧ್ಯವಾಗದೆ, ಆವರಣದಲ್ಲಿ ಓಳಿ ತೆಗೆದು ಬಗೆಬಗೆಯ ಗಿಡಗಳನ್ನು ಬೆಳೆಸತೊಡಗಿದರು.

ಆರು ತಿಂಗಳೊಳಗೆ ಮನೆಯ ಸುತ್ತಲೂ ಒಳ್ಳೆಯದೊಂದು ತೋಟ ತಯಾರಾಯಿತು. ಓಳಿ ತೆಗೆಯಲಿಕ್ಕೆ, ಹೊಂಡ ತೋಡಲಿಕ್ಕೆ, ಬುಡ ಮಗುಚಲಿಕ್ಕೆ, ಈಟು ಹಾಕಲಿಕ್ಕೆ, ನೀರು ಹೊಯ್ಯಲಿಕ್ಕೆ ಗೋವಿಂದಯ್ಯನಿಗೆ ಮಗಂದಿರು ಯಾವ ಸಹಾಯವನ್ನೂ ಮಾಡಲಿಲ್ಲ. ಅದರ ಮೇಲೆ ಈ ವಯಸ್ಸಿನಲ್ಲಿ ಇನ್ನೂ ಸಂಪಾದಿಸಬೇಕೆಂಬ ತಾಪತ್ರಯ ಹೋಗಲಿಲ್ಲವೆಂದುಕೊಂಡು, ತಂದೆಯನ್ನು ನೋಡಿ ಹೇಳನೆಯಿಂದ ನಗುತ್ತಿದ್ದರು.

ಗೋವಿಂದಯ್ಯನಿಗೆ ತೋಟದಿಂದಲೂ ಒಳ್ಳೆಯ ಆದಾಯವು ಬರತೊಡಗಿತು. ಅಲ್ಲಿ ಬೆಳೆದ ತರಕಾರಿಗಳನ್ನು, ಹಣ್ಣುಗಳನ್ನು, ಹೂಗಳನ್ನು ಕ್ಷಣಮಾತ್ರದಲ್ಲಿ ಕೊಂಡುಕೊಂಡು ಹೋಗುತ್ತಿದ್ದರು. ಹೀಗಿರುವಾಗ ಅಂದುಕೊಳ್ಳದ ಹಾಗೆಯೇ ಒಂದು ಉಪದ್ರ ಬರತೊಡಗಿತು.

ಗೋವಿಂದಯ್ಯನ ನೆರೆಯಲ್ಲಿಯೇ ಹೊಸತಾಗಿ ಸೋಮನಾಥನೆಂಬವನು ಬಂದು ಸೇರಿದನು. ಅವನದು ಮುಖ್ಯವಾಗಿ ಹಾಲಿನ ವ್ಯಾಪಾರ. ಅವನಿಗೆ ಇಪ್ಪತ್ತು ಮೇಕೆಗಳಿದ್ದುವು. ಆ ಮೇಕೆಗಳಿಗೆ ಅವನು ಎಂತಹ ಮೇವು ಹಾಕುವನೋ ತಿಳಿಯಲಿಲ್ಲ. ಅವುಗಳ ಕಣ್ಣು ಗೋವಿಂದಯ್ಯನ ತೋಟದ ಮೇಲೆಯೇ ಬೀಳುತ್ತಿದ್ದುವು! ತಾನು ಪ್ರಾಣಪ್ರದವಾಗಿ ಬೆಳೆಸುತ್ತಿರುವ ತೋಟವು ಆ ಮೇಕೆಗಳ ದಾಳಿಯಿಂದ ನಾಶವಾಗಿ ಹೋಗುವುದನ್ನು ಗೋವಿಂದಯ್ಯನಿಂದ ನೋಡಲಾಗಲಿಲ್ಲ. ದಿನಾ ಯಾವುದೋ ಒಂದು ಸಮಯದಲ್ಲಿ ಅವು ತೋಟದೊಳಗೆ ದಾಳಿಮಾಡಿ ಹೋಗುತ್ತಿದ್ದುವು.

ಗೋವಿಂದಯ್ಯ ಮಗಂದಿರ ಹತ್ತಿರ, ಮೂವರೂ ಸರದೀ ಮಾಡಿಕೊಂಡು ತೋಟವನ್ನು ಕಾಯಿರಪ್ಪಾ ಎಂದು ಪ್ರಾರ್ಥಿಸುವಂತೆ ಹೇಳಿದನು. ಆದರೆ ಮಗಂದಿರು ತಂದೆಯು ಹೇಳುವ ಮಾತನ್ನು ಲಕ್ಷ್ಯ ಮಾಡಲೇ ಇಲ್ಲ.

ಕಡೆಗೆ ಗೋವಿಂದಯ್ಯ ಸುತ್ತಲೂ ಬಲವಾದ ಬೇಲಿ ಕಟ್ಟಿಸಿದರು. ಆ ಬೇಲಿಯ ಯಾವುದೋ ಒಂದು ಕಡೆಯಲ್ಲಿ ತೂತುಮಾಡಿ ಮೇಕೆಗಳು ಒಳಗೆ

ತೂರುತ್ತಿದ್ದುವು. ಅದು ಪ್ರಯೋಜನವಿಲ್ಲವೆಂದುಕೊಂಡು ಬೇಲಿಯ ಎರಡು ಬದಿಗಳಿಗೂ ಮುಳ್ಳುಗಳನ್ನು ಹಾಕಿಸಿ, ಮರದ ಬಾಗಿಲು ಮಾಡಿಸಿದರು.

ಈ ಉಪಾಯವು ಕೆಲವು ದಿನಗಳವರೆಗಷ್ಟೇ ನಿಂತಿತು. ಬುದ್ಧಿ ಮೀರಿದ ಮೇಕೆಗಳು ಕ್ರಮವಾಗಿ ತಮ್ಮ ಕೊಂಬುಗಳಿಂದ ಮರದ ಬಾಗಿಲನ್ನು ತೆರೆಯಲಿಕ್ಕೂ ಅಭ್ಯಾಸ ಮಾಡಿಕೊಂಡುವು.

ಇನ್ನೇನು ಮಾಡಲಿಕ್ಕೂ ತೋರದೆ ಗೋವಿಂದಯ್ಯ ಸೋಮನಾಥನ ಬಳಿಗೇ ಹೋಗಿ ತಮ್ಮ ಗೋಳಾಟವನ್ನು ಹೇಳಿ, "ನಿನ್ನ ಮೇಕೆಗಳನ್ನು ಹೇಗೋ ಒಂದು ರೀತಿಯಲ್ಲಿ ಹದ್ದಿನಲ್ಲಿಟ್ಟುಕೋ ಅಪ್ಪಾ" ಎಂದರು.

"ನಾನೇನುತಾನೇ ಮಾಡಲಿ ಸ್ವಾಮಿ? ಒಂದೆರಡು ಮೇಕೆಗಳಲ್ಲವಷ್ಟೆ? ನಿಮಗಾದರೆ ಮೂವರು ಕುಮಾರರಿದ್ದಾರೆ, ಅವರಿಂದಲೇ ಮೇಕೆಗಳನ್ನು ಓಡಿಸಲಾಗದಿದ್ದರೆ, ನನ್ನ ಮನೆಯಲ್ಲಿರುವವನು ನಾನೊಬ್ಬನೇ. ಹೇಗೆ ತಡೆಯಲು ಸಾಧ್ಯ? ನಿಮ್ಮ ಹೊರತು ಗ್ರಾಮದಲ್ಲಿ ಬೇರೆ ಯಾರೂ ಹೀಗೆ ದೂರು ತಂದದ್ದಿಲ್ಲ. ನಿಮ್ಮ ಮನೆ ತೋಟಗಳ ಭದ್ರತೆ ನಿಮಗೆ ಸೇರಿದ್ದು. ಅಲ್ಲವೆನ್ನುವಿರಾ?" ಎಂದನು.

ಅವನು ಹೇಳಿದುದರಲ್ಲಿ ನಿಜವಿರುವುದೆಂದು ಗೋವಿಂದಯ್ಯನಿಗೆ ತೋರಿತು. ಅವರು ತೋಟದ ಬಾಗಿಲಿನ ಹತ್ತಿರ ಮೂರು ಗಜ ಉದ್ದಕ್ಕೆ ಹೊಂಡ ತೋಡಿಸಿದರು. ಆ ಹೊಂಡದ ಮೇಲೆ ದಾರಿಗೆ ಸರಿಸಮನಾಗಿ ಎತ್ತರವಾದ ದಂಡೆ ಕಟ್ಟಿಸಿದರು. ಆಮೇಲೆ ಹೊಂಡವು ಮುಚ್ಚಿ ಹೋಗುವ ಹಾಗೆ ಗುಂಡಗಿನ ಕಬ್ಬಿಣದ ಕೊಳವೆಗಳನ್ನು ಹತ್ತಿರ ಹತ್ತಿರ ತಾಗಿಸಿಟ್ಟು, ದಾರಿಯೊಂದಿಗೆ ಸೇರಿಸಿದರು. ಗುಂಡಗಿನ ಕಬ್ಬಿಣದ ಕೊಳವೆಯ ಮೇಲೆ ಮೇಕೆಗಳ ಗೊರಸು ನಿಲ್ಲಲಾರವು, ಅದುದರಿಂದ ಅವು



ಬಾಗಿಲನ್ನು ತೆರೆದರೂ ಮುಂದೆ ಬಂದು ತೋಟದೊಳಗೆ ಪ್ರವೇಶಿಸಲಾರವು.

ಇಷ್ಟೆಲ್ಲ ಸಿದ್ಧತೆಯಾದ ಮೇಲೆ ಕೆಲವು ದಿನಗಳು ಕಳೆದುವು. ಗೋವಿಂದಯ್ಯನಿಗೆ ಮೇಕೆಗಳ ಕಾಟ ತಪ್ಪಿಹೋದಂತೆಯೇ ಕಂಡಿತು. ಮತ್ತೆ ಒಂದು ದಿನ ಒಂದು ಮೇಕೆ ಕಬ್ಬಿಣದ ಕೊಳವೆಗಳ ಮೇಲೆ ಕಾಲು ತಾಗದಂತೆ ಮೂರು ಗಜ ದೂರಕ್ಕೆ ಹಾರಲು ಪ್ರಯತ್ನಮಾಡಿತು. ಆಗ ಅದು ಕೊಳವೆಗಳ ಮೇಲೆ ಬಿದ್ದು ಏಳಲಾಗದೆ ಚಡಪಡಿಸತೊಡಗಿತು. ಆ ಶಬ್ದ ಕೇಳಿ ಗೋವಿಂದಯ್ಯ ಬಂದು ಮೇಕೆಯ ಪರಿಸ್ಥಿತಿಗೆ ಕನಿಕರಪಟ್ಟು, ಅದನ್ನು ಎತ್ತಿಕೊಂಡು ಹೋಗಿ ಹೊರಗೆ ಬಿಟ್ಟರು.

ಆದರೆ ಮೇಕೆ ಮಾತ್ರ ಅವರ ಮೇಲೆ ಕನಿಕರ ಪಡಲೇ ಇಲ್ಲ. ಅದು ಬಿಡದೆ ಆಮೇಲೆ ಎರಡು ಮೂರು ಪ್ರಯತ್ನಗಳನ್ನು ಮಾಡಿ ಹಿಂದೆ ಹೋಯಿತು. ಒಂದು ದಿನ ಆ ಕೊಳವೆಗಳನ್ನು

ಮುಟ್ಟದೆ ತೋಟದೊಳಗೆ ಹಾರಿಯೇಬಿಟ್ಟಿತು, ಪಂದ್ಯದಲ್ಲಿ ಗೆದ್ದಹಾಗೆ ಆ ಮೇಕೆ.

ಹೀಗೆ ಜಯಶಾಲಿಯಾದ ಆ ಮೇಕೆ ತೋಟದಲ್ಲಿ ಸಿಕ್ಕಿದ ಗಿಡಗಳನ್ನು ಅದರ ಪಾಡಿಗೆ ತಿಂದುಕೊಂಡಿರುವಾಗ ಗೋವಿಂದಯ್ಯ ಅಲ್ಲಿಗೆ ಬಂದರು. ನಡೆದುದನ್ನು ನೋಡಿ ಅವರು ಸ್ವಲ್ಪವೂ ಚಲಿಸದೆ ನಿಂತರು. ತನಗೇನೂ ಸಂಬಂಧವಿಲ್ಲದವರ ಹಾಗೆ ಅದು ತಿನ್ನುವುದನ್ನು ನೋಡುತ್ತಾ ನಿಂತರು.

ಆಗ ಅಲ್ಲಿಗೆ ಅವರ ಮೂವರು ಮಗಂದಿರೂ ಬಂದು, "ಅರರೇ! ಅಪ್ಪಾ, ನಿಮ್ಮ ಪ್ರಾಣ ಸಮಾನವಾದ ತೋಟವನ್ನು ಈ ಮೇಕೆ ಮೇಯುತ್ತಿದೆ! ನೋಡುತ್ತಾ ನಿಂತಿರೇಕೆ? ನಿಮ್ಮ ಶ್ರಮವೆಲ್ಲಾ ಹಾಳಾಯಿತೆಂದು ನಿರುತ್ಸಾಹವಾಯಿತೇ?" ಎಂದರು ಆಶ್ಚರ್ಯದಿಂದ.

ಗೋವಿಂದಯ್ಯ ಸ್ವಲ್ಪ ಹೊತ್ತು ತಲೆದೂಗುತ್ತಾ ಸುಮ್ಮನಿದ್ದು, "ತಿನ್ನಲಿ ಬಿಡ್ರೋ! ಈ ತೋಟ ಅದಕ್ಕೋಸ್ಕರವೇ ಮಾಡಿದ್ದೇನೆ. ಅದು ಈ ತೋಟ ಪೂರಾ ಮೇದರೆ ನಾನು ಮಾಡಿದ ಪಾಪವೆಲ್ಲ ನಶಿಸಿ, ಪುಣ್ಯ ಕೂಡಾ ಬರುತ್ತೆ!" ಎಂದರು.

ಅವರ ಮೂವರು ಪುತ್ರರೂ ವಿಚಿತ್ರವಾಗಿ ತಂದೆಯನ್ನು ನೋಡುತ್ತ, "ನೀವೇನು ಹೇಳುವಿರೋ ಅರ್ಥವಾಗಿಲ್ಲ" ಎಂದರು.

"ತನ್ನ ಮೇವಿಗಾಗಿ ಈ ಮೇಕೆ ಮೂರು ಗಜ ದೂರವನ್ನು ಹಾರಿ ಬಂದಿದೆ. ಉಳಿದ ಮೇಕೆಗಳೂ ಹಾಗೇ ತಾನೇ? ಯಾವುದಕ್ಕೂ ಉಪಯೋಗವಿಲ್ಲದ ಸೋಮಾರಿಗಳನ್ನು ಪೋಷಿಸುವುದರಿಂದ ನನಗೆ ಬರುವ ಪಾಪವು ಈ ಪಾಪದ ಪ್ರಾಣಿಗಳ ಮೇಲೆ ಕನಿಕರ ತಾಳುವುದರಿಂದ ಹೋಗುತ್ತದೆ. ಈ ದಿನದಿಂದ ನನ್ನ ಹಣ ಆಸ್ತಿ ಪೂರಾ ಯಾರು ಈ ಮೇಕೆಯ ಹಾಗೆ ಶ್ರಮಪಡುವರೋ ಅವರಿಗೇ ಕೊಡುತ್ತೇನೆ" ಎಂದರು ಗೋವಿಂದಯ್ಯ.

ತಮ್ಮ ಆಹಾರ ಸಂಪಾದಿಸಲು ಆ ಮೇಕೆಯಷ್ಟು ಶ್ರಮ ಕೂಡಾ ತಾವು ಪಡುವುದಿಲ್ಲವೆಂಬುದನ್ನು ಈಗ ಅರ್ಥಮಾಡಿಕೊಂಡು, ಗೋವಿಂದಯ್ಯನ ಕುಮಾರರು ಲಜ್ಜಿತರಾದರು. ಈ ದಿನ ಆ ಮೇಕೆಯ ಮೇಲೆ ಕನಿಕರಿಸಿದಂತೆಯೇ, ತಮ್ಮ ತಂದೆ ನಾಳೆ ಯಾವ ಕಳ್ಳನ ಮೇಲೆಯೋ ಕನಿಕರಪಡಬಹುದು, ಅಥವಾ ಯಾವ ಬಡವರ ಕಷ್ಟಗಳನ್ನೋ ನೋಡಿ ಅವರಿಗೆ ಆಸ್ತಿ ಪೂರಾ ದಾನಮಾಡಲೂ ಬಹುದು.

ಈ ಭಯವು ಮನಸ್ಸಿಗೆ ಹತ್ತಿದ ಕೂಡಲೇ ಗೋವಿಂದಯ್ಯನ ಮಗಂದಿರು ತಮ್ಮ ಸೋಮಾರಿತನ ಬಿಟ್ಟು, ತಂದೆಯ ಆಶಯದಂತೆ ಅವರಿಗೆ ಸಹಾಯಕರಾಗುತ್ತಾ ಬಂದರು, ಗೋವಿಂದಯ್ಯನ ಚಿಂತೆ ಪರಿಹಾರವಾಯಿತು.






## ೩

[ಸೂರ್ಯವರ್ಮನು ಸತ್ತು ಬಿದ್ದುದನ್ನು ನೋಡಿದ ಸುಬಾಹುವೆಂಬ ಸೇವಕನು, ಈ ಸಂಗತಿಯನ್ನು ಸೂರ್ಯವರ್ಮನ ಕುಮಾರನಾದ ಚಂದ್ರವರ್ಮನಿಗೆ ಹೇಳಲು ಹೊರಟನು. ದಾರಿಯಲ್ಲಿ ಅವನ ಕುದುರೆಯನ್ನು ಸರ್ಪಕೇತುವಿನ ಅನುಚರರು ಕೊಂದರು. ಆಮೇಲೆ ಅವನಿಗೆ ದಿವಿಟಿಗೆಗಳೊಂದಿಗೆ ಹಳ್ಳಿಯವರ ಗುಂಪು ಕಂಡಿತು. ಅಷ್ಟರಲ್ಲಿ ಕೆಲಮಂದಿ, ಸವಾರರು ಅವನನ್ನು ಮುತ್ತಿಕೊಂಡರು. — ಇನ್ನು ಓದಿರಿ.]

ತನ್ನನ್ನು ಮುತ್ತಿಕೊಂಡ ಸವಾರರನ್ನೂ, ಮುಂದೆ ಹಾರಿಬಂದವನ ಕ್ರೂರ ಭಾವವನ್ನೂ ನೋಡಿ, ಸುಬಾಹು ಕ್ಷಣಕಾಲ ನಿಶ್ಚೇಷ್ಟಿತನಾದನು. ತನ್ನ ಬದುಕು ಇಲ್ಲಿಗೆ ಮುಗಿಯಿತೆಂದೇ ಅವನಿಗೆ ತೋರಿತು. ತನ್ನ ಯಜಮಾನನ ಮರಣದ ಸಂಗತಿ ವೀರಪುರದಲ್ಲಿರುವವರಿಗೆ ತಿಳಿದ ಮೇಲೆ ಈ ಬಗೆಯ ಸಾವು ಬಂದಿದ್ದರೆ ಅವನಿಗೆ ಇಷ್ಟೊಂದು ಚಿಂತೆ ಬರುತ್ತಿದ್ದಿಲ್ಲ. ಈ ಕ್ಷಣದಲ್ಲಿ ತಾನು ಸತ್ತರೆ ವೀರಪುರದ ಸಂಸ್ಥಾನಕ್ಕೆ ಬಹುದೊಡ್ಡ ಗಂಡಾಂತರ. ಸತ್ತ ಒಡೆಯನ ಆತ್ಮಕ್ಕೆ ಸ್ವಲ್ಪವೂ ಶಾಂತಿ ಇರದು. ತನ್ನ ಆತ್ಮಕ್ಕೂ ಶಾಂತಿಯಿಲ್ಲ. ದೈವಕೃಪೆಯಿಂದ ತಾನೀಗ ಈ ಸವಾರರನ್ನು ಹೇಗಾದರೂ ಮೋಸಪಡಿಸಿ ಪಾರಾಗುವಂತಾದರೆ ಎಷ್ಟು ಒಳ್ಳೆಯದಿತ್ತು !

"ಏಯ್ ! ಯಾರೋ ನೀನು ? ಮಾತಾಡದವ ಹಾಗೇಕೆ ನಿಂತಿದ್ದಿ ?" ಎಂದು ಮುಂದೆಬಂದ ಆ ಸವಾರರ ಮುಖ್ಯಸ್ಥನೊಬ್ಬನು ಅವನ ಜುಟ್ಟು ಹಿಡಿದು ಆಡಿಸಿ ಕೇಳಿದನು.

ಆಗ ಜನರ ಗುಂಪಿನಲ್ಲಿದ್ದ ಒಬ್ಬನು, "ಪಾಪ ! ಈ ಭಿಕ್ಷುಕನಿಗೆ ಏನು ಗೊತ್ತಿದೆ! ಸುಮ್ಮನೆ ಹಿಂಸಿಸಿದರೆ ಏನು ಹೇಳಿಯಾನು ? ಉಪವಾಸದಿಂದ ಮಾತೂ



ಕೈಕಾಲೂ ಬಿದ್ದುಹೋದವನ ಹಾಗಿದ್ದಾನೆ ! ನಿಮ್ಮನ್ನು ನೋಡಿ ಹೆದರಿದವನಿಗೆ ಮಾತೆತ್ತಲಿಕ್ಕೂ ಧೈರ್ಯ ಬಾರದು" ಎಂದನು ಕನಿಕರದಿಂದ.

ಈ ಮಾತು ಕೇಳಿ ಸುಬಾಹು ಪ್ರಜ್ಞೆಗೆ ಬಂದನು. ತಾನೀಗ ಸಾಧಾರಣ ಬಡ ಭಿಕ್ಷುಕನಂತೆ ನಟಿಸುವುದೇ ಸರಿಯೆನಿಸಿತು. ಆದರಿಂದ ಪ್ರಾಣವನ್ನಾದರೂ ಉಳಿಸಿಕೊಂಡು ನುಸುಳಬಹುದೆಂದು ಧೈರ್ಯ ಉಂಟಾಯಿತು.

"ಅಯ್ಯಯ್ಯಾ ! ಮೊದಲು ರೊಟ್ಟಿ ಚೂರು. ಒಂದು ಮುಷ್ಟಿ..." ಎನ್ನುತ್ತಾ, ಆರ್ತರಾಗ ತೆಗೆದು ಸವಾರನ ಮೋರೆಯನ್ನೇ ದೊಡ್ಡ ಕಣ್ಣುಗಳಿಂದ ನೋಡುತ್ತಾ, ಕುದುರೆಯ ಕಡಿವಾಣವನ್ನು ಹಿಡಿದನು.

"ಚಿ ಛೀ ! ಇವನಾವ ಪೀಡೆ ! ಯಾವನೋ ವೀರಪುರದ ಗೂಢಚಾರಿ ಅಂದುಕೊಂಡೆನು. ತೊಲಗಾಚೆ!" ಎಂದು ಸವಾರನು ಕುದುರೆಯನ್ನು ಆಚೆಗೆ ತಿರುಗಿಸಿಕೊಂಡು ಹೋದನು,

"ಇವನೆಂಥ ಗೂಢಚಾರ ! ಶರೀರದಲ್ಲಿ ಜೀವವಿರುವ ಹಾಗೆ ಇಲ್ಲ. ಇವನ ಹರಕು ಪರಕು ಬಟ್ಟೆಯೂ ಅವನೂ ! ನಡೆಹೋ ! ಅರೆ ! ನಿನ್ನ ಶರೀರವನ್ನೇ ಹೊರಲಾರದವನಿಗೆ ಆ ದಪ್ಪದ ಕೋಲು ಯಾವ ಕರ್ಮಕ್ಕೆ !" ಎಂದನು ಇನ್ನೊಬ್ಬ ಸವಾರ ಅವಹೇಳನೆಯಿಂದ.

"ಅಯ್ಯಾ, ಈ ಕೋಲೇ ನನ್ನನ್ನು ನಡೆಸುತ್ತದೆ ದೊರೇ ! ಕಾಡು ದಾರೀಲಿ ಚಿರತೆಯೋ ತೋಳವೋ ಬಂದರೆ ಬರಿಗೈಯಿಂದ ಏನಾದೀತು ದೊರೇ ?" ಎಂದನು ಸುಬಾಹು ದೀನಾಲಾಪವಾಗಿ.

ಆ ಮಾತು ಕೇಳಿ ಕುದುರೇ ಸವಾರರೂ, ಜನರ ಗುಂಪಿನಲ್ಲಿದ್ದ ಕೆಲವರೂ ಗಹಗಹಿಸಿ ನಕ್ಕರು. "ಎಷ್ಟು ದೊಡ್ಡ ಬೇಟೆಗಾರನೋ ! ಕಾಲು ಎತ್ತಿ ಕಾಲು ಹಾಕಲಿಕ್ಕೇ ನಡುಗುವವನು ಚಿರತೇ ತೋಳಗಳನ್ನು ಓಡಿಸುವನಂತೆ ! ಭಲೇ ! ಭಲೇ !" ಎಂದರು ಕೆಲವರು.

"ಅಯ್ಯಾ ! ಸುಮ್ಮನೆ ಹೋಗುವಿರಾ ? ಒಂದಿಷ್ಟು ರೊಟ್ಟೀ ಚೂರು ಹಾಕಿರಯ್ಯಾ ! ಆಮೇಲೆ ನನ್ನ ಪ್ರತಾಪ ಬೇಕಾದರೆ ನೋಡಿರಯ್ಯಾ ! ಈ ಏಳು ದಿನಗಳಿಂದ ಬರಿ ನೀರು ಕುಡಿದೇ ಬದುಕಿದ್ದೇನೆ. ಇಲ್ಲದಿದ್ದರೆ ಎರಡು ಚಿರತೆಗಳನ್ನು ನಾನೊಬ್ಬನೇ ಕೊಂದು ಹಾಕೇನು. ಏನೋ ನನ್ನ ಕೆಟ್ಟ ಕಾಲ. ನಿಮ್ಮ ದೃಷ್ಟಿಯಲ್ಲಿ ನಾನೊಬ್ಬ ಬಲು ಹೀನನಾಗಿದ್ದೇನೆ. ಹೀಗೆ ಬಿಕ್ಷೆ ಬೇಡುವ ಗತಿಗೆ ಬಂದಿದ್ದೇನೆ !..." ಎಂದನು ಸುಬಾಹು.

ಸವಾರರಾರೂ ಅವನ ಮಾತನ್ನು ಕೇಳಿಸಿಕೊಳ್ಳಲಿಲ್ಲ, ಅವರು ಕುದುರೆಗಳನ್ನು ಮುಂದೆ ಹುರಿದುಂಬಿಸುತ್ತ, "ಓಹೋಯ್ ! ನೀವೆಲ್ಲಾ ಬೇಗದಲ್ಲಿ ರಕ್ಕಸ ದಿಬ್ಬದ ಹತ್ತಿರ ಬಂದು ಸೇರಬೇಕು. ಅಲ್ಲಿ ನಿಮಗೆ ಬೇಕಾದ ಆಯುಧಗಳೆಲ್ಲಾ ಕೊಡಲಾಗುತ್ತದೆ. ಬೆಳಗಾಗುವುದರೊಳಗೆ ವೀರಪುರವು ನಮ್ಮ ಮುಷ್ಟಿ

ಯೊಳಗೆ ಸಿಕ್ಕುತ್ತದೆ. ಜೈ ಸರ್ಪಕೇತು ಮಹಾರಾಜರಿಗೆ!" ಎಂದು ಕೂಗಿ ಹೇಳಿ, ಮುಂದಕ್ಕೆ ಹಾಗೆಯೇ ಘೋಷಿಸಿಕೊಂಡು ಕುದುರೆಗಳನ್ನು ದೌಡಾಯಿಸಿಕೊಂಡು ಹೋದರು.

ಆ ಸೈನಿಕರು ಹಾಗೆ ಹೊರಟುಹೋದ ಮೇಲೆ ಜನರೊಳಗಿನ ಕೆಲವರು ಮುಂದಕ್ಕೆ ಬಂದು ಸುಬಾಹುವನ್ನು ಮುತ್ತಿಕೊಂಡರು. ಅವರಲ್ಲಿ ಒಬ್ಬನು ಸುಬಾಹುವನ್ನು ನೋಡಿ, "ಅಲ್ಲೋ ಅಪ್ಪ! ನೀನೇನೂ ಮುದುಕನಾಗಿ ಹೋಗಿಲ್ಲ. ಒಳ್ಳೇ ಪ್ರಾಯದವನಾಗಿಯೇ ಕಾಣುವಿ. ಕಾಲೂ ಕೈಗಳೂ ಚೆನ್ನಾಗೇ ಇವೆ. ಹೀಗಿರುವಾಗ ಊರೂರು ಅಲೆಯುತ್ತಾ ಬಿಕ್ಕೆಬೇಡುವ ಹೀನಗತಿ ನಿನಗೇನು ಬಂತು? ಬೈರಾಗಿ ವೇಷವಾದರೂ ಹಾಕಬಹುದಿತ್ತು. ಹಾಗೇನಾಯಿತು ನಿನಗೆ? ಮೈ ಬಗ್ಗಿಸಿ ಕೆಲಸ ಮಾಡಲು ಉದಾಸೀನವೇನು?" ಎಂದನು.

"ಅದೇ ನನಗೂ ಗೊತ್ತಾಗೋದಿಲ್ಲಯ್ಯಾ. ಅದನ್ನು ತಿಳಿದುಕೊಳ್ಳಬೇಕೆಂತಲೇ ಆ ಗುಡ್ಡದ ಮೇಲಿದ್ದ ಒಬ್ಬ ಗುರುವನ್ನು ಐದು ವರ್ಷಗಳಿಂದ ಸೇವಿಸಿಕೊಂಡಿದ್ದೇನೆ. ಏನು ಮಾಡಲಿ? ಅವರಿಗೆ ಇನ್ನೂ ನನ್ನ ಮೇಲೆ ದಯೆ ಬರಲಿಲ್ಲವಯ್ಯಾ. ಈಗ ಒಂದು ಗಂಟೆಯ ಮೊದಲು ಅವರಿಗೆ ಸ್ವಲ್ಪ ದಯೆ ಬಂದು ದೀವಿಟಿಗೆ ಹಿಡಿದಿದ್ದ ನಿಮ್ಮೆಲ್ಲರನ್ನೂ ನನಗೆ ತೋರಿಸಿ, 'ಈ ದಿನ ಬೆಳಗಾಗುವುದರೊಳಗೆ ನಿನ್ನನ್ನು ಹಿಡಿದಿರುವ ಶನಿ ನಿನ್ನನ್ನು ಬಿಟ್ಟು ಹೋಗುತ್ತದೆ. ನಿನ್ನದು ಮಾತ್ರವಲ್ಲ, ನಿನ್ನೊಂದಿಗಿರುವವರ ಶನಿ ಕೂಡಾ ತೊಲಗಿ ಹೋಗುತ್ತದೆ. ಅಗೋ, ಅಲ್ಲಿ ಕಾಣುವ ಶನಿ ಹಿಡಿದವರ ದೀವಿಟಿಗೆಯ ಪ್ರಕಾಶಕ್ಕೆ ಹೋಗು' ಎಂದು ಅಪ್ಪಣೆ ಕೊಟ್ಟರು. ಅದ್ದರಿಂದಲೇ ನಾನು ಗುಡ್ಡವಿಳಿದು ನಿಮ್ಮ ಬಳಿಗೆ ಬಂದೆನು. ಆಹಾರವೇನೂ ತೆಗೆದುಕೊಳ್ಳದ್ದರಿಂದ ಆಗ ತಿಳಿಯದ ಹಸಿವೆ ಈಗ ನಿಮ್ಮನ್ನೆಲ್ಲಾ




ನೋಡಿದ ಕೂಡಲೇ ಒಮ್ಮೆಗೇ ಆಶೆ ಎದ್ದುಕೊಂಡಿತು" ಎಂದನು ಸುಬಾಹು.

ಅವರಾರೂ ಊಹಿಸದಂತೆ ಸುಬಾಹುವಿನ ಬಾಯಿಯಿಂದ ಹೊರಟ ಹೊಸ ಸಂಗತಿಯನ್ನು ಕೇಳಿ, ಅಲ್ಲಿದ್ದವರೆಲ್ಲ ಆಶ್ಚರ್ಯ ಸಂಭ್ರಮಗಳಿಂದ ಅವಾಕ್ಕಾಗಿ ನಿಂತರು. ಆಮೇಲೆ ಒಬ್ಬನು ಸುಬಾಹುವನ್ನು ನೋಡಿ, "ಏನಂದೆ? ಆ ಗುಡ್ಡದ ಮೇಲಿರುವ ಮಹಾಪುರುಷನನ್ನು ಕುರಿತು ಬಹಳ ಕಾಲದಿಂದ ಕೇಳಿದ್ದೇವೆಯೇ ಹೊರತು ನೋಡಿದವರಾರೂ ಇಲ್ಲ. ಈ ದಿನ ಬೆಳಗಾಗುವುದರೊಳಗೆ ವೀರಪುರವನ್ನು ವಶಪಡಿಸಿಕೊಂಡು ಕೊಳ್ಳೆ ಹೊಡೆಯಲಿದ್ದೇವೆ. ದಿವ್ಯ ದೃಷ್ಟಿಯಿರುವ ಆ ಮಹಾಪುರುಷನಿಗೆ ಇದೆಲ್ಲಾ ಮುಂದಾಗಿ ತಿಳಿದ ಹಾಗಿದೆ. ನಾವೆಲ್ಲಾ ದರಿದ್ರ ಶನಿ ಹಿಡಿದವರೆಂಬುದು ನಿಜ. ಇನ್ನು ನಮಗೆ ವಿಜಯವೆಂಬುದು ನಿಜವಾಯಿತು. ನಾವೆಲ್ಲಾ ಒಮ್ಮೆಗೇ ಶ್ರೀಮಂತರಾಗಬಹುದು. ಜತೆಯಲ್ಲಿ ನಿನಗೂ

ಅದೃಷ್ಟ ಹಿಡಿಯುತ್ತೆ! ಇನ್ನು ತಡಮಾಡಬಾರದು. ಹೊರಡೋಣ, ನಡೆಯಿರಿ" ಎಂದನು.

ಕೂಡಲೇ ಕೆಲವರು ಗ್ರಾಮದೊಳಗೆ ಓಡುತ್ತಾ ಹೋಗಿ, ಸುಬಾಹುವಿಗಾಗಿ ರೊಟ್ಟಿ, ಹಾಲು ಹಣ್ಣುಗಳನ್ನು ತೆಗೆದುಕೊಂಡು ಬಂದರು. ಸುಬಾಹು ತೃಪ್ತಿಯಾಗಿ ಅವುಗಳಿಂದ ಹೊಟ್ಟೆ ತುಂಬಿಸಿಕೊಂಡ ಮೇಲೆ, ಜನರು ಅವನ ಮುಂದೆ ಹೊಸ ದುಸ್ತುಗಳನ್ನಿಟ್ಟು, ಅವನ ಚಿಂದಿ ಬಟ್ಟೆಗಳನ್ನು ತೆಗೆದು ಹಾಕಲು ಹೇಳಿದರು.

ತಾನು ಈಗ ಒಳ್ಳೆಯ ದುಸ್ತಿನಲ್ಲಿದ್ದರೆ ಯಾರಾದರೂ ತನ್ನನ್ನು ಗುರುತಿಸಬಹುದೆಂದುಕೊಂಡು ಸುಬಾಹು, ಅವರನ್ನು ಆಪ್ಯಾಯತೆಯಿಂದ ನೋಡುತ್ತ, "ಮಿತ್ರರೇ! ನಿಮ್ಮ ದೊಡ್ಡ ದಯೆಗೆ ತುಂಬಾ ಕೃತಜ್ಞತೆಗಳಯ್ಯಾ. ಆದರೆ ಈಗ ನಾನು ಹೊಸ ಬಟ್ಟೆ ಧರಿಸಲು ಗುರುಗಳ ಅನುಮತಿ ಇಲ್ಲವಲ್ಲಾ! ಧರಿಸಿದರೆ ಅವರ ಆಜ್ಞೆಯನ್ನು ಧಿಕ್ಕರಿಸಿದಂತಾದೀತು. ನನ್ನನ್ನು ಹಿಡಿದು ಪೀಡಿಸುವ ಶನಿ ಇನ್ನು ಬೆಳಗಾಗುವಷ್ಟರಲ್ಲಿ ಬಿಟ್ಟು ಹೋಗುತ್ತದೆ. ಅಷ್ಟರವರೆಗೆ ಹೀಗೇ ಇರುತ್ತೇನೆ. ಆಮೇಲೆ ಇವುಗಳನ್ನು ತೊಟ್ಟುಕೊಳ್ಳುತ್ತೇನೆ" ಎಂದನು.

ಆಗ ಕೆಲವರು ದಿಕ್ಕುಗಳು ಗಡಚಿಕ್ಕುವಂತೆ "ಜೈ ಜೈ" ಎಂದು ಕೂಗಿದರು. ಕೆಲವರು ಸುಬಾಹುವನ್ನು ನೋಡಿ, "ನಿನ್ನ ಹೆಸರೇನಯ್ಯಾ? ಹೇಳಲೇ ಇಲ್ಲ ಇನ್ನೂ?" ಎಂದರು.

"ಹೆಸರು, ಹೆಸರು? ಈ ಜಡ ಶರೀರಕ್ಕೊಂದು ಹೆಸರು. ತಂದೆತಾಯಿಗಳು ಇಟ್ಟ ಹೆಸರು ಏನಿದ್ದರೇನು? ಶನಿಯಿಂದ ಇಷ್ಟು ಕಾಲ ಪೀಡಿತನಾದ ನಾನು ಗುರುಗಳ ಆಜ್ಞೆಯಂತೆ ಹೇಳಿಕೊಳ್ಳುವುದನ್ನೇ ಬಿಟ್ಟಿದ್ದೇನೆ. ಅದು ಬಿಟ್ಟು ಹೋದ ಮೇಲೆ ಗುರುಗಳ ಆಜ್ಞೆಯಂತೆ..." ಎಂದು ಅವನು ಹೇಳುವಾಗ ಜನರ ಗುಂಪಿನಲ್ಲಿ ಒಬ್ಬನು, "ಸರಿ ಸರಿ. ಗುರುಭಕ್ತನಾದ ನಿನ್ನ ಜತೆಯಲ್ಲೇ ನಮ್ಮೆಲ್ಲರ ಶನಿಯೂ ಬಿಟ್ಟು ಹೋಗುತ್ತದೆ. ಅಷ್ಟರವರೆಗೆ ನಿನ್ನ ಹೆಸರು ಶನಿಮರ್ದನ ಎಂದಿರಲಿ" ಎಂದನು.



"ಭಲೇ ಚೆನ್ನಾಗಿದೆ! ಶನಿಮರ್ದನನಿಗೆ ಜೈ! ನಮ್ಮೆಲ್ಲರ ಶನಿಮರ್ದನನಿಗೆ ಜೈ ಜೈ!" ಎಂದು ಅನೇಕರು ಕುಣಿದು ಕೂಗಿದರು.

ಆಮೇಲೆ ಎಲ್ಲರೂ ದೀವಟಿಗೆಗಳ ಬೆಳಕಿನಲ್ಲಿ ರಕ್ಕಸ ದಿಬ್ಬದ ಕಡೆಗೆ ಹೊರಟರು. ಆ ಗುಂಪಿನವರು ಮಾತಾಡಿಕೊಳ್ಳುವುದನ್ನು ಹಿಡಿದು ಅವರೆಲ್ಲಾ ಪರಮ ದರಿದ್ರರೆಂದೂ, ಧನಧಾನ್ಯಗಳು ಬೇಕಾದಷ್ಟು ಸಿಗುವುದೆಂಬ ಆಶೆ ಹುಟ್ಟಿಸಿದುದರಿಂದಲೇ ಅವರು ವೀರಪುರಕ್ಕೆ ಕೊಳ್ಳೆ ಹೊಡೆಯಲು ಹೊರಟಿದ್ದಾರೆಂದೂ ಸುಬಾಹುವಿಗೆ ತಿಳಿಯಿತು. ಪಾಮರ ಜನರ ಯೋಚನೆ ಅಷ್ಟೇ ತಾನೇ?

"ಅಯ್ಯಾ, ನನಗೆ ವೀರಪುರದ ಸಮಾಚಾರ ವಿವರವಾಗಿ ತಿಳಿಯದು. ಅಲ್ಲಿಯ ರಾಜ ಸೂರ್ಯವರ್ಮ ಎಂದು ಕೇಳಿದ್ದೇನೆ. ನಿಮ್ಮ ಮಾತು ಕೇಳುವಾಗ ಆ ರಾಜ ಬಹಳ ಕೆಟ್ಟ ಪ್ರಜಾಪೀಡಕನೆಂದು ಗೊತ್ತಾಗುತ್ತೆ. ಹೌದೇನು? ಹಾಗಾದರೆ ಅವನಿಗೂ ತಕ್ಕ ಶಾಸ್ತಿಯಾಗುತ್ತೇ ಅನ್ನಿ" ಎಂದು ಒಬ್ಬನ ಮುಖ ನೋಡಿ ಕೇಳಿದನು ಸುಬಾಹು. ಅವನ ಮಾತನ್ನು ಕೇಳಿ ಆ ಮನುಷ್ಯನು ನಕ್ಕು, "ಈ ಸಾಮಂತ ರಾಜರಲ್ಲಿ ಪ್ರಜಾಕಂಟಕರಲ್ಲದವರು ಯಾರಿದ್ದಾರೆ? ಸೂರ್ಯವರ್ಮನ ಸಂಗತಿ ನಮಗೇನೂ ಗೊತ್ತಿಲ್ಲ. ನಮಗೆ ತಿಳಿದ ಮಟ್ಟಿಗೆ ಸರ್ಪಕೇತುವಿಗಿಂತ ಜನಕಂಟಕ ಇನ್ನೊಬ್ಬನಿರಲಿಕ್ಕಿಲ್ಲವಪ್ಪ!" ಎಂದನು.

"ಹಾಗಿದ್ದರೆ ವೀರಪುರವನ್ನು ಕೊಳ್ಳೆ ಹೊಡೆಯಲು ನಾವೇಕೆ ಹೋಗಬೇಕು? ಹಾಗೆ ಮಾಡಿದರೆ ಸರ್ಪಕೇತುವಿಗೆ ನಾವು ಸಹಾಯ ಮಾಡುತ್ತೇವೋ ಇಲ್ಲವೋ?" ಎಂದನು ಸುಬಾಹು.

ಅಷ್ಟುಹೊತ್ತಿಗೆ ಅವರಿಬ್ಬರ ಸಂಭಾಷಣೆಯಲ್ಲಿ ಮತ್ತೆ ನಾಲ್ವರು ಮಂದಿ ಬಾಯಿ ಹಾಕಿದರು, ಅವರು ಸುಬಾಹುವಿನ ಪ್ರಶ್ನೆಗೆ ವಿಚಿತ್ರವಾಗಿ ನಗುತ್ತ, "ನಾವು ಸರ್ಪಕೇತುವಿಗೆ ಸಹಾಯ ಮಾಡಲಿಕ್ಕೆ ಹೋಗುವುದು ಅಲ್ಲ. ನಮ್ಮ ಉಪಯೋಗಕ್ಕೇ ನಾವು ಹೋಗುವುದು. ಅಲ್ಲಿ ಏನೇನನ್ನು ಬಾಚಿ





ಕೊಂಡು ಬರುತ್ತೇವೋ ಅದೆಲ್ಲವೂ ನಮ್ಮದೇ. ಆವನ ಸೈನಿಕರಾರಿಗೂ ಅದರಲ್ಲಿ ಪಾಲು ಕೊಡಲಾರೆವು. ಬಡವರಾದ ನಮಗೆ ಸಿಕ್ಕಿದಷ್ಟು ಲಾಭ, ಅಷ್ಟೇ" ಎಂದರು.

ಆ ಮಾಯಕತ್ವವೂ, ಮೊರಟುತನವೂ, ದುರಾಶೆಯೂ, ತುಂಬಿರುವ ಈ ಹಳ್ಳಿಗಾಡಿನವರೊಂದಿಗೆ ಏನು ಮಾತಾಡಿದರೂ ಪ್ರಯೋಜನವಿಲ್ಲವೆಂದು ಸುಬಾಹುವಿಗೆ ಗೊತ್ತಾಯಿತು. ಅವರ ದೃಷ್ಟಿಯಲ್ಲಿ ತಮ್ಮನ್ನು ಪಾಲಿಸುವ ಪಾಲಕರೆಲ್ಲರೂ ಒಂದೇ, ಸಮಯ ಬಂದಾಗಲೆಲ್ಲಾ ಇತರರು ತಮ್ಮನ್ನು ದೋಚಿಕೊಳ್ಳುವುದರಿಂದ, ಅದೇ ವಿಧವಾಗಿ ಅವರೂ ಆವಕಾಶ ಸಿಕ್ಕಿದಾಗ ಬೇರೆಯವರನ್ನು ದೋಚಿಕೊಳ್ಳುತ್ತಾರೆ. ಗ್ರಾಮವಾಸಿಗಳ ಮನಸ್ತತ್ವವು ಹೀಗೆಯೇ ಇರುತ್ತೆ ಪಾಪ!

ನಡೆಯುತ್ತಾ ಸ್ವಲ್ಪ ಹೊತ್ತಿಗೆ ಎಲ್ಲರೂ ರಕ್ಕಸ ದಿಬ್ಬದ ಹತ್ತಿರ ಹೋಗಿ ಸೇರಿದರು. ಅಷ್ಟು ಹೊತ್ತಿಗೆ ಆಲ್ಲಿ ನೂರಾರು ಸಂಖ್ಯೆಯಲ್ಲಿ ಜನರು ಸೇರಿದ್ದರು. ಅವರಲ್ಲಿ ಅನೇಕರ ಹತ್ತಿರ ಬೆಳಗುತ್ತಿರುವ ದೊಡ್ಡ ದೊಡ್ಡ ದೀವಟಿಗೆಗಳಿದ್ದುವು. ಅವರೆಲ್ಲರನ್ನೂ ಕೆಲವುಂದಿ ಸೈನಿಕರು ಸಾಲುಸಾಲಾಗಿ ನಿಲ್ಲಿಸುತ್ತಿದ್ದರು. ಸುಬಾಹು ಸೇರಿರುವ ಗುಂಪಿನವರನ್ನೂ ಹಾಗೆ ಸಾಲುಗಟ್ಟಿ ನಿಲ್ಲಿಸಿದರು. ಎಲ್ಲರಿಗೂ ಆಯುಧವನ್ನು ಮರೆಸಿಟ್ಟುಕೊಳ್ಳುವಂತೆ ಹೇಳಿ ಕೊಡಲಾಯಿತು.

ಅದಾದನಂತರ ದಳನಾಯಕರಂತೆ ದುಸ್ತು ಹಾಕಿಕೊಂಡಿದ್ದ ಕೆಲವರು ಅಶ್ವಾರೋಹಿಗಳು ಮುಂದಕ್ಕೆ ಬಂದು ನಿಂತರು. ಅವರಲ್ಲಿ ಮುಖ್ಯನಾದೊಬ್ಬನು ಅಲ್ಲಿ ಸೇರಿದ್ದ ಜನರನ್ನು ಉದ್ದೇಶಿಸಿ ಈ ವಿಧವಾಗಿ ಹೇಳಿದನು:

"ಮಹಾಶಕ್ತಿ ಸಂಪನ್ನರೂ, ಪರಮ ದಯಾಮಯರೂ ಆಗಿರುವ ಸರ್ಪಕೇತು ಮಹಾರಾಜರ ಸಹಾಯದಿಂದ ನೀವೆಲ್ಲಾ ಇಷ್ಟು ಹೊತ್ತಿಗೆ ದಾರಿದ್ರ್ಯದ ಬಾಧೆಗಳಿಂದ ವಿಮುಕ್ತರಾಗಲಿದ್ದೀರಿ. ಈಗ ಇರುವ ಸಮಸ್ಯೆ ಏನೆಂದರೆ. ವೀರಪುರ ಪಟ್ಟಣಕ್ಕೆ ಹೇಗೆ ಪ್ರವೇಶಿಸುವುದು ಎಂಬುದೇ. ಪಟ್ಟಣದ ದ್ವಾರಪಾಲಕರನ್ನು ಮೋಸಪಡಿಸಿ, ದ್ವಾರಗಳನ್ನು ಒಮ್ಮೆ ತೆರೆಯುವ ಹಾಗೆ ಮಾಡಿಬಿಟ್ಟರೆ, ಆಮೇಲೆ ನಮ್ಮನ್ನು ಪಟ್ಟಣದೊಳಗೆ ತಡೆಯುವವರು ಯಾರೂ ಇಲ್ಲ. ಆಗ ನಾವು ಕಟ್ಟೊಡೆದ ಪ್ರವಾಹದ ಹಾಗೆ ನುಗ್ಗುತ್ತೇವೆ. ತಡೆಯುವ ಶಕ್ತಿ ಯಾರಿಗೂ ಇರದು. ಆದುದರಿಂದ ನಿಮ್ಮಲ್ಲಿ ನೂರು ಮಂದಿ ಮುಂದಾಗಿ ಪಟ್ಟಣದ ದ್ವಾರಗಳ ಹತ್ತಿರ ಹೋಗಿ ಹಾಹಾಕಾರ ಮಾಡುತ್ತ, ಸರ್ಪಕೇತು ರಾಜನ ಸೈನಿಕರು ಗ್ರಾಮಗಳ ಮೇಲೆ ಬಿದ್ದು ಕೊಳ್ಳೆ ಹೊಡೆಯುತ್ತಿದ್ದಾರೆಂದು ಕೆಟ್ಟ ಕೆಟ್ಟ ಆರ್ತನಾದ ಮಾಡಿರಿ. ಆ ಕೂಗು ಕೇಳಿ ದ್ವಾರಪಾಲಕರು ಬಾಗಿಲುಗಳನ್ನು ತೆರೆಯುತ್ತಾರೆ. ಕೂಡಲೇ ನೀವು ಪಕ್ಕಕ್ಕೆ ಸರಿದು ದಾರಿ

ಬಿಡಬೇಕು. ನಿಮ್ಮ ಹಿಂದೆಯೇ ಪೌರ ದುಸ್ತಿನಲ್ಲಿರುವ ನಮ್ಮ ಸೈನಿಕರು ಒಳಗೆ ನುಗ್ಗುತ್ತಾರೆ. ಆಮೇಲೆ ನೀವೆಲ್ಲರೂ ಪ್ರವೇಶಿಸಿ ನಿಮ್ಮಿಷ್ಟ ಬಂದ ಹಾಗೆ ನಗರವನ್ನು ಕೊಳ್ಳೆ ಹೊಡೆಯಿರಿ. ಆಗ ನೀವುಗಳು ಸಂದರ್ಭ ಸಿಕ್ಕಿದಾಗಲೆಲ್ಲಾ ಯಶೋವರ್ಧನ ರಾಜನಿಗೆ ಜಯಕಾರ ಮಾಡುತ್ತಾ ಇರಬೇಕು. ಯಶೋವರ್ಧನ ರಾಜನು ಕಳುಹಿಸಿದವರೇ ಬಂದಿದ್ದಾರೆಂದು ಭ್ರಮೆಪಟ್ಟು ಸೂರ್ಯವರ್ಮನ ಸೈನಿಕರಲ್ಲಿ ಕೆಲವರಾದರೂ ನಿಮ್ಮನ್ನು ಇದಿರಿಸಲು ಹೆದರುತ್ತಾರೆ. ಉಳಿದವರನ್ನು ಪೌರರ ದುಸ್ತಿನಲ್ಲಿರುವ ನಮ್ಮ ಸೈನಿಕರೇ ಹತ ಮಾಡುತ್ತಾರೆ. ಮುಖ್ಯ ಮಾತು, ಯಾವ ಪರಿಸ್ಥಿತಿಯಲ್ಲಿಯೂ ನೀವು ಸರ್ಪಕೇತು ರಾಜನ ಹೆಸರನ್ನು ಉಚ್ಚರಿಸಲೇ ಬಾರದು. ಇದನ್ನು ಮಾತ್ರ ಮರೆಯಬಾರದು!"

ದಳ ನಾಯಕನ ಮಾತು ಮುಗಿದುದೇ ತಡ, ಅಲ್ಲಿ ಸೇರಿದ ಜನರ ಗುಂಪಿನೊಳಗಿನಿಂದ "ಯಶೋವರ್ಧನ ಮಹಾರಾಜರಿಗೆ ಜೈ!" ಎಂಬ ಕೂಗು ಘನ ಗರ್ಜನೆಯಾಗಿ ಮೊಳಗಿತು. ವೀರಪುರವನ್ನು ಆಕ್ರಮಿಸಲಿಕ್ಕಾಗಿ ಇಷ್ಟೊಂದು ಘಾತುಕವಾದ ನಿಗೂಢ ದುಸ್ತಂತ್ರ ನಡೆಯುವುದೆಂದು ಸುಬಾಹುವಿಗೆ ಗೊತ್ತಾಗಿ ನಿರ್ವಿಣ್ಣನಾದನು. ತಾನು ಇವರಿಂದ ತಪ್ಪಿಸಿಕೊಂಡು ಮುಂದಾಗಿ ವೀರಪುರವನ್ನು ಪ್ರವೇಶಿಸಿ, ಚಂದ್ರವರ್ಮನೊಂದಿಗೆ ಈ ಮೋಸವನ್ನು ಕುರಿತು ತಿಳಿಸಿಬಿಟ್ಟರೆ, ಗಂಡಾಂತರವನ್ನು ತಪ್ಪಿಸಬಹುದು, ನಗರವನ್ನೂ ಅವನನ್ನೂ ಕಾಪಾಡಬಹುದು. ಆದರೆ ಇವರೆಲ್ಲರನ್ನೂ ತಪ್ಪಿಸಿಕೊಂಡು ನಗರದ ಕಡೆಗೆ ಹೋಗುವ ಬಗೆ ಹೇಗೆ? ಏನು ಉಪಾಯ?

ಸುಬಾಹು ತೀವ್ರವಾಗಿ ಆಲೋಚಿಸಿಕೊಂಡಿರುವಾಗ, ಜನರು ಮಹಾ ಪ್ರವಾಹದಂತೆ ಮುಂದಕ್ಕೆ ಕದಲಿದರು. ಅವರಲ್ಲಿ ಅನೇಕರು ಪೌರರ ದುಸ್ತಿ-



ನಲ್ಲಿರುವ ಸರ್ಪಕೇತುವಿನ ಸೈನಿಕರೆಂಬುದನ್ನೂ ಸುಬಾಹು ತಿಳಿದನು. ಎಲ್ಲರಗಿಂತಲೂ ಮುಂದೆ ಓಡುತ್ತಿರುವ ನೂರು ಮಂದಿಗಳೊಂದಿಗೆ ಸುಬಾಹು ಕೂಡಾ ಓಡಿ ಸೇರಿಕೊಂಡನು. ನೋಡುತ್ತಿದ್ದ ಹಾಗೆ ಅವರು ನಗರ ದ್ವಾರಗಳನ್ನು ಸಮೀಪಿಸಿದರು. ಕೂಡಲೇ ಜನರಲ್ಲಿ ಹಲವರು ಶೋಕಿಸುವಂತೆ ದೊಡ್ಡ ಕಂಠದಿಂದ "ಅಯ್ಯಯ್ಯೋ! ಬಾಗಿಲು ತೆರೀರಪ್ಪೋ! ಸರ್ಪಕೇತು ಸೈನಿಕರು ನಮ್ಮ ಗ್ರಾಮಗಳ ಮೇಲೆ ಬಿದ್ದು, ಕಂಡವರನ್ನು ಸದೆಬಡಿದು ಹಾಕ್ತಾರೋಯ್! ಸಿಕ್ಕಿದ್ದೆಲ್ಲಾ ದೋಚಿಕೊಂಡು ಹೋಗ್ತಿದ್ದಾರಪ್ಪೋ! ಕಾಪಾಡ್ರಯ್ಯಾ! ಮಹಾರಾಜರ ಹತ್ರ ಹೇಳ್ರೋ! ಸೈನಿಕರನ್ನು ಕಳಿಸಿರೋ! ಕಾಪಾಡ್ರೋ! ಸಹಾಯ ಮಾಡಿರೋ!..." ಎಂದು ಮುಂತಾಗಿ ಕೂಗ ತೊಡಗಿದರು.

ಪಟ್ಟಣ ದ್ವಾರಗಳ ಹಿಂದಿದ್ದ ಕಾವಲಿನವರು ಬಾಗಿಲು ತೆರೆಯುವುದೋ, ಬಿಡುವುದೋ ಎಂದು

ಸಂದೇಹಪಡುವುದರೊಳಗೆ, ಜನರೊಳಗಿನಿಂದ ಮತ್ತೆ ಕೆಲವರು ಭಯಕಂಪಿತರಾಗಿ, "ಅಯ್ಯಾ! ನಮಗೆ ಸೂರ್ಯವರ್ಮ ಮಹಾರಾಜರೇ ದಿಕ್ಕು! ಅವರ ಹತ್ರ ನಮ್ಮ ಮೊರೆ ಹೇಳಿಕೊಳ್ಳೇವಯ್ಯಾ! ಬೇಗ ಬಾಗಿಲು ತೆರೀರಯ್ಯಾ!" ಎಂದು ಕೆಟ್ಟ ಸ್ವರದಿಂದ ಅರಚಿದರು.

ಆ ಕೂಡಲೇ ಬಾಗಿಲುಗಳು ತೆರೆದುವು. ಅದುವರೆಗೂ ಬಾಗಿಲಲ್ಲಿದ್ದವರೆಲ್ಲ ಪಕ್ಕಕ್ಕೆ ಸರಿದುಕೊಂಡರು. ಮರುಕ್ಷಣದಲ್ಲಿ ಪೌರರ ದುಸ್ತಿನಲ್ಲಿದ್ದ ಸರ್ಪಕೇತುವಿನ ಸೈನಿಕರು, ಅಡಗಿಸಿಟ್ಟುಕೊಂಡಿದ್ದ ಆಯುಧಗಳನ್ನು ಹೊರಗೆ ತೆಗೆದು, ಕಾವಲುಗಾರರ ಮೇಲೆ ಬಿದ್ದು, ಒಮ್ಮೆಗೇ ಕೆಲವರನ್ನು ಕಡಿದು ಕೊಂದರು. ಉಳಿದವರನ್ನು ಖೈದಿಗಳಾಗಿ ಬಂಧಿಸಿದರು. ಒಂದೇಬಾರಿಗೆ ಕ್ರೂರ ಕೋಲಾಹಲ ಧ್ವನಿಯೆಬ್ಬಿಸುತ್ತ ಮುಂದಕ್ಕೆ ಧಾವಿಸಿದರು.

ಸುಬಾಹು ಒಂದೇ ಹಾರಿಕೆಗೆ ದ್ವಾರವನ್ನು ಹಾರಿ ಹೋರಾಡುತ್ತಿರುವ ಕಾವಲಿನವರನ್ನು ದಾಟಿ ಮುಂದಕ್ಕೆ ಓಡಿದನು.

ಅದೇ ಸಮಯದಲ್ಲಿ ಹಿಂದಿನಿಂದ ಕೇಕೆಗಳೂ, ಚಪ್ಪಾಳೆಗಳೂ ಎದ್ದುವು. "ಯಾರವನು ಒಬ್ಬನೇ ಓಡುತ್ತಾನೆ! ಎಲ್ಲರೂ ಗುಂಪುಕಟ್ಟು ಬಿಡದೆ ಮುಂದೆ ಹೋಗಬೇಕು. ಆ ಓಡುವವನನ್ನು ಅಡ್ಡಗಟ್ಟಿ ನಿಲ್ಲಿಸಿರಿ! ಹಿಡೀರಿ! ಹಿಡೀರಿ!" ಎಂದು ದಳನಾಯಕರು ಮೇಲಿಂದ ಮೇಲೆ ಕೂಗಿದರು. ಸರ್ಪಕೇತುವಿನ ಸೈನಿಕರು ನಾಲ್ಕಾರು ಮಂದಿ "ನಿಲ್ಲು! ನಿಲ್ಲು!" ಎನ್ನುತ್ತಾ ಸುಬಾಹುವಿನ ಬೆಂಬತ್ತಿದರು. ತಾನೀಗ ಸಾವೋ ಬದುಕೋ ಎಂಬುದನ್ನು ನಿರ್ಣಯಿಸುವ ಸಮಯ ಬಂದಿತೆಂದು ಸುಬಾಹು ನಿರ್ಣಯಿಸಿ, ಥಟ್ಟನೆ ಹಿಂದಿರುಗಿ ಸಮೀಪಿಸುತ್ತಿದ್ದ ಸೈನಿಕನ ಮೇಲೆ ಹಾರಿ ಅವನ ಪಕ್ಕೆಯ ಮೇಲೊಂದು ಒದೆ ಕೊಟ್ಟನು. ಅವನು ಹಿಂದಕ್ಕೆ ಮಗುಚಿ ಬೀಳುವುದರೊಳಗೆ ಅವನ ಕೈಯಲ್ಲಿದ್ದ ಕತ್ತಿಯನ್ನೂ ಎಳೆದುಕೊಂಡನು. ಅಷ್ಟರಲ್ಲೇ ಮತ್ತೊಬ್ಬನು ಅವನನ್ನು ಸಮೀಪಿಸಿಬಿಟ್ಟನು. "ಎಲ್ಲಿಗೆ ಓಡ್ತೀಯೋ! ದ್ರೋಹಿ! ಘಾತ! ಘಾತ!" ಎಂಬ ಕೂಗುಗಳು.

"ಓಹ್! ನಮ್ಮೊಳಗೇ ಇವನೊಬ್ಬ ಮೋಸಗಾರ! ಅರರೇ!" ಎಂದು ಆ ಸೈನಿಕನು ಕತ್ತಿ ಬೀಸುವುದರೊಳಗೆ ಸುಬಾಹುವಿನ ಕತ್ತಿ ಅವನ ಗುಂಡಿಗೆಯೊಳಗೆ ಹೊಕ್ಕಿತು. ಅಷ್ಟರಲ್ಲಿ ಮತ್ತೊಬ್ಬ ಸೈನಿಕನು ಮುಂದೆ ಬರುವುದನ್ನು ಗಮನಿಸಿ ಸುಬಾಹು ಅಲ್ಲಿ ಹೊತ್ತು ಕಳೆಯಲು ಇಷ್ಟವಿಲ್ಲದೆ, ಥಕ್ಕನೆ ಹಿಂದಿರುಗಿ ರಾಜಪ್ರಾಸಾದದ ಕಡೆಗೆ ಮಿಂಚಿನ ವೇಗದಲ್ಲಿ ಓಡಿದನು.

—(ಇನ್ನೂ ಇದೆ)






# ಕಲ್ಪಣೆಗಳ ಪ್ರಭಾವ

ಶವದೊಳಗೆ ಆವಹಿಸಿಕೊಂಡ ಬೇತಾಳವು ತಿರುಗಿ ಬರುವ ರಾಜಾ ತ್ರಿವಿಕ್ರಮನಿಂದ ತಪ್ಪಿಸಿಕೊಳ್ಳಲು ಇನ್ನೊಂದು ಕಥೆಯನ್ನು ಕಲ್ಪಿಸಿಕೊಳ್ಳುತ್ತಿರುವಾಗಲೇ, ಅಲ್ಲಿಗೆ ಬಂದ ತ್ರಿವಿಕ್ರಮನು ಶವವನ್ನು ಮರದಿಂದ ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು ಮೌನ ಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಬೇತಾಳವು ಶವದ ಬಾಯಿಯ ಮೂಲಕ ಮಾತಾಡಲು ತೊಡಗಿ, "ಎಲೈ ರಾಜನೇ, ಈ ನಡುರಾತ್ರಿಯ ಭೀತಿಗೊಳಿಸುವ ಆವೇಳೆಯಲ್ಲಿ ನೀನು ಹೀಗೆ ಸ್ಮಶಾನದಲ್ಲಿ ಅಲೆಯಬೇಕಾದ ಕರ್ಮಕ್ಕೆ ಯಾವುದೋ ಅಲೌಕಿಕ ಶಕ್ತಿಯೇ ಕಾರಣವಿರಬೇಕು. ಎಷ್ಟೇ ಹಟ, ಧೈರ್ಯ, ಸಾಹಸಗಳಿದ್ದರೂ ಮನುಷ್ಯನು ತಾನು ಕೋರಿದುದನ್ನೆಲ್ಲಾ ಸಾಧಿಸಿಕೊಳ್ಳಲಾರನು. ಅದಕ್ಕೆ ಅವನ ಊಹನೆಗೆ ನಿಲುಕದಂತಹ ಸಂಭವಗಳು ಅಡ್ಡಬಂದು ಬಿಡುವುದುಂಟು. ಅವುಗಳು ಅವನಿಗೆ ಸಹಾಯಕವಾಗಿಯೂ ತಡೆಯಾಗಿಯೂ ಬರುವಂತಹ ಏನೋ ಬಾಹ್ಯಶಕ್ತಿಗಳಾಗಿವೆ. ಉದಾಹರಣೆಗಾಗಿ ಲಕ್ಷ್ಮೀಧರನೆಂಬ ಒಬ್ಬ ನೌಕಾ ವರ್ತಕನ ಕಥೆ ಹೇಳುತ್ತೇನೆ. ಕಷ್ಟ

ಬೇತಾಳಕಥೆಗಳು?..



ತಿಳಿಯದಂತೆ ಕೇಳುತ್ತಾ ಹೋಗು" ಎಂದು ಕಥೆಯನ್ನು ಹೇಳಲು ಪ್ರಾರಂಭಿಸಿತು.

ಲಕ್ಷ್ಮೀಧರನೆಂಬ ವರ್ತಕನು ಭಾರೀ ಮೊತ್ತದ ಮೂಲ ಬಂಡವಾಳ ಹಾಕಿ ವಿದೇಶಗಳಿಗೆ ಹಡಗುಗಳಲ್ಲಿ ಸರಕುಗಳನ್ನು ರವಾನಿಸಿ ವ್ಯಾಪಾರ ನಡೆಸುತ್ತಿದ್ದನು. ಈ ಬಗೆಯ ವ್ಯಾಪಾರದಲ್ಲಿ ಅವನು ಲಕ್ಷಾಂತರಗಳನ್ನು ಸಂಪಾದಿಸುತ್ತಿದ್ದನು.

ಹಾಗಿರುವಾಗ ಒಂದು ಸಾರಿ ಇದಿರು ನೋಡದ ರೀತಿಯಲ್ಲಿ ವಿಪರೀತವಾದ ನಷ್ಟ ಉಂಟಾಯಿತು. ಸಮುದ್ರಚೋರರು ಅವನ ಹಡಗುಗಳನ್ನು ಅಟಕಾಯಿಸಿ ಪೂರ್ತಿ ಸರಕುಗಳನ್ನೂ ಕೊಳ್ಳೆ ಹೊಡೆದುಕೊಂಡು ಹೋಗಿಬಿಟ್ಟರು.

ಈ ದುಃಖದ ಸಂಗತಿಯನ್ನು ತಿಳಿದು ಅವನ ಮಿತ್ರರನೇಕರು ಬಂದು ಸಹಾನುಭೂತಿ ತೋರಿಸಿ, ಏನೇನೋ ಸಮಾಧಾನ ಹೇಳಿ ಹೋಗುತ್ತಿದ್ದರು. ಹಾಗೆ ಬಂದ ಮಿತ್ರನೊಬ್ಬನು ಅವನ ಬೆರಳಲ್ಲಿದ್ದ ಒಂದು ಉಂಗುರವನ್ನು ಸ್ವಲ್ಪ ಹೊತ್ತು ದಿಟ್ಟಿಸಿ ನೋಡಿ, ತಲೆಯಾಡಿಸಿ ಕಣ್ಣರಳಿಸಿ, "ಈ ಹವಳ ಹಾಕಿಸಿದ ಉಂಗುರವನ್ನು ಯಾವಾಗ ಮಾಡಿಸಿಕೊಂಡಿರಿ ?" ಎಂದನು.

"ಚೆನ್ನಾಗಿರುತ್ತದೆಂದುಕೊಂಡು ಈ ನಡುವೆ ನಾನೇ ಮಾಡಿಸಿಕೊಂಡೆನು. ಏಕೆ ಹೀಗೆ ಕೇಳುವಿರಿ ? ಅದರಲ್ಲಿ ಆಶ್ಚರ್ಯಪಡುವಂತಹ ವಿಶೇಷವೇನಿದೆ ?" ಎಂದು ಕೇಳಿದನು ಲಕ್ಷ್ಮೀಧರ.

"ಹವಳ ಮಣಿ ನಿಮಗೆ ಕೂಡಿ ಬರುವಂಥಾ ಯೋಗಕಾರಕವಿದ್ದೇನಾ ? ನೋಡಿದ್ದೀರಾ ? ವಿಚಾರಿಸಿ ತಿಳಿದೂ ಇದನ್ನು ಆರಿಸಿದಿರಾ, ಅಲ್ಲ ಕಾಕತಾಳೀಯವಾಗಿ ಸುಮ್ಮನೆ ಮೆಚ್ಚಿ ಮಾಡಿಸಿಕೊಂಡಿರಾ ?" ಎಂದನು ಆ ಮಿತ್ರ.

"ಕೂಡಿಬರುವಂಥಾ ಸಂಗತಿ ಯಾವುದೂ ನನಗೆ ಗೊತ್ತಿಲ್ಲ. ಹವಳವು ಚೆನ್ನಾಗಿ ಕಂಡಿತು, ಉಂಗುರ ಮಾಡಿಸಿಕೊಂಡೆ. ಏನೋ ವಿಚಾರಿಸಲು ಬಂದವರು ಮತ್ತೇನೋ ಕೇಳುವಿರೇಕೋ ?" ಎಂದನು ಲಕ್ಷ್ಮೀಧರ.

"ಅದೇ ಅಂದುಕೊಂಡೆ. ಇದು ಬಹಳ ಮುಖ್ಯ ವಿಷಯವಾಗಿದೆ. ಈ ಮಣಿಯ ಪ್ರಭಾವದ ಕಾರಣದಿಂದಲೇ ನಿಮಗೆ ವ್ಯಾಪಾರದಲ್ಲಿ ಇಷ್ಟು ದೊಡ್ಡ ನಷ್ಟವಾಗಿದೆ. ಮುಖ್ಯವಾಗಿ ನಿಮ್ಮಂಥವರು ಈ ಸಂಗತಿ ತಿಳಿದುಕೊಳ್ಳಬೇಕಯ್ಯ" ಎಂದು ಹೇಳಿ ಲಕ್ಷ್ಮೀಧರನ ಮಿತ್ರನು ಅಲ್ಲಿಂದ ಹೊರಟು ಹೋದನು.

ಮಿತ್ರನು ಹಾಗೆ ಹೇಳಿ ಹೋದ ಮೇಲೆ ಲಕ್ಷ್ಮೀಧರನ ಮನಸ್ಸಿನೊಳಗೆ ಒಂದು ಅನುಮಾನವು ಹೊಕ್ಕಿತು. ಅದು ಕ್ಷಣ ಕ್ಷಣಕ್ಷಣಕ್ಕೂ ದೊಡ್ಡದಾಗುತ್ತಾ ಹೋಯಿತು. ಅವನು ಹತ್ತು ಮಂದಿ "ತಲೆ ಹಣ್ಣಾದವರನ್ನು ಕಲೆತು, ಹವಳದ ಮಣಿಯನ್ನು ಕುರಿತು ವಿಚಾರಿಸತೊಡಗಿದನು.

ಅವರಿಂದ ಒಂದೇ ವಿಧವಾದ ಸುದ್ದಿ ತಿಳಿಯಿತು. "ಕೇಳಿ ಲಕ್ಷ್ಮೀಧರರೇ, ಒಬ್ಬೊಬ್ಬ ಮನುಷ್ಯನಿಗೆ ಒಂದೊಂದು ಬಗೆಯ ಮಣಿ ಕೂಡಿಬರುವಂಥಾದ್ದು. ಅದಕ್ಕೆ ವಿರುದ್ಧ ಮಣಿ ಧರಿಸಿದರೆ ಅನಾಹುತವಾಗುತ್ತದೆ. ಇದು ಜಗತ್ತಿಗೇ ತಿಳಿದ ಸತ್ಯ. ನಿಮ್ಮಂಥ ವರ್ತಕ ಪ್ರಮುಖರಿಗೆ ಗೊತ್ತಿಲ್ಲವೆಂದರೇನು ?" ಎಂಬುದೇ.



ಇದನ್ನು ಕೇಳಿದ ಮೇಲೆ ಲಕ್ಷ್ಮೀಧರನ ಅನುಮಾನ ಭಯವಾಗಿ ಮಾರ್ಪಟ್ಟಿತು. ಪಕ್ಕದ ಊರಿನಲ್ಲಿ ಆಭರಣಗಳಿಗೆ ತಕ್ಕದಾದ ಕಲ್ಮಣಿಗಳನ್ನು ವಿಕ್ರಯಿಸುವ ಸೋಮಶೇಖರನೆಂಬ ವರ್ತಕನಿದ್ದನು. ಅವನಲ್ಲಿರುವ ವಿಶೇಷವೇನೆಂದರೆ, ಯಾರಿಗೆ ಎಂತಹ ಕಲ್ಮಣಿ ಯೋಗಕಾರಕವೆಂಬುದನ್ನು ಕೂಡಾ ಅವನೇ ತಿಳಿದು ವಿಕ್ರಯಿಸುವನು. ಈ ಸಂಗತಿ ತಿಳಿದು ಲಕ್ಷ್ಮೀಧರನು ಸೋಮಶೇಖರನನ್ನು ನೋಡಲು ಹೋದನು.

ಸೋಮಶೇಖರನು ಲಕ್ಷ್ಮೀಧರನ ನಾಮ ನಕ್ಷತ್ರ ತಿಳಿದ ಮೇಲೆ, ಅವನು ಹೇಳಿದುದನ್ನೆಲ್ಲಾ ಮೌನವಾಗಿ ಕೇಳಿದನು. ಅನಂತರ ಅವನ ಉಂಗುರದ ಹವಳವನ್ನು ಒಂದು ಸಾಧನದಿಂದ ಫಟಕ್ಕನೆ ಕಿತ್ತು ಪಕ್ಕದಲ್ಲಿದ್ದ ಕಸದ ಬುಟ್ಟಿಗೆ ಹಾಕಿದನು. ಆಮೇಲೆ ನಾಮನಕ್ಷತ್ರಗಳನ್ನು ಗುಣಿಸಿ ಕಳೆದು, ಬೆರಳು ಮಡಿಚಿ ಲೆಕ್ಕ ಹಾಕಿದ ಮೇಲೆ ಪಕ್ಕದಲ್ಲಿದ್ದ ಚಿಕ್ಕ ಪೆಟ್ಟಿಗೆಯ ಮುಚ್ಚಳ ತೆರೆದನು.

ಆ ಪೆಟ್ಟಿಗೆಯಲ್ಲಿದ್ದ ಕಲ್ಲು ಹರಳುಗಳಲ್ಲಿ ನೀಲ ಕಾಂತಿಯ ಒಂದು ಕಲ್ಮಣಿಯನ್ನು ತೆಗೆದು, ಅದನ್ನು ಜಾಣ್ಮೆಯಿಂದ ಲಕ್ಷ್ಮೀಧರನ ಉಂಗುರಕ್ಕೆ ಹೊದುಗಿಸಿ ಅವನ ಬೆರಳಿಗೆ ತೊಡಿಸಿದನು.

"ಇದು ಜಾತಿ ನೀಲಕಲ್ಲು. ನೀವು ಎಲ್ಲಾ ವೇಳೆಯಲ್ಲಿಯೂ ಧರಿಸತಕ್ಕಂಥಾದ್ದು. ಇದರ ಪ್ರಭಾವವನ್ನು ಮುಂದೆ ಮುಂದೆ ನೀವೇ ನೋಡುವಿರಿ. ಇದರ ಬೆಲೆ ಬಹಳ ಹೆಚ್ಚೇ ಆದರೂ, ನೀವು ಹೇಳಿದುದನ್ನೆಲ್ಲಾ ಕೇಳಿದ ಮೇಲೆ, ವ್ಯಾಪಾರದಲ್ಲಿ ಬಹಳ ನಷ್ಟಪಟ್ಟ ಸಂಗತಿ ಅರ್ಥಮಾಡಿಕೊಂಡೆನು. ಆದ್ದರಿಂದ ಲಾಭಕ್ಕೆ ಹೋಗದೆ, ನಷ್ಟವೂ ಆಗದಂತೆ ಇದನ್ನು ನಿಮಗೆ ಕೇವಲ ಸಾವಿರ ವರಹಗಳಿಗೆ ಕೊಡುತ್ತೇನೆ" ಎಂದನು ಸೋಮಶೇಖರ.

ಲಕ್ಷ್ಮೀಧರನು ಮರುಮಾತಿಲ್ಲದೆ ಸೋಮಶೇಖರನಿಗೆ ಸಾವಿರ ವರಹಗಳನ್ನು ಕೊಟ್ಟು, ಮನೆಗೆ ಹಿಂದಿರುಗಿದನು.

ಮುಂದೆ ಕೆಲವು ತಿಂಗಳುಗಳು ಕಳೆದುವು. ಒಂದು ದಿನ ಲಕ್ಷ್ಮೀಧರನು ಸೋಮಶೇಖರನ ಅಂಗಡಿಗೆ ಹೋದನು. ಅವನನ್ನು ನೋಡಿದ ಕೂಡಲೇ ಸೋಮಶೇಖರನು, "ಏನು ಸ್ವಾಮಿ ! ಈಗ ನೀಲ ಕಲ್ಲಿನ ಪ್ರಭಾವ ಹೇಗಿದೆ ? ಚೆನ್ನಾಗಿ ಫಲಿಸಿರಬೇಕಲ್ಲ ?" ಎಂದು ಕೇಳಿದನು.

"ಅದರ ಪ್ರಭಾವ ನನ್ನ ಮೇಲೆ ಪ್ರಯೋಜನವಾದ ಹಾಗೆ ಗೊತ್ತಾಗುವುದಿಲ್ಲ. ಮತ್ತೊಮ್ಮೆ



ಬಹಳ ದೊಡ್ಡ ನಷ್ಟಕ್ಕೆ ಗುರಿಯಾದೆ. ಅದನ್ನು ತಿಳಿಸೋಣವೆಂದೇ ಬಂದೆ" ಎಂದನು ಲಕ್ಷ್ಮೀಧರ.

"ಯಾವ ರೂಪದಲ್ಲಿ ಎಷ್ಟು ನಷ್ಟವಾಯಿತೆಂಬುದನ್ನು ಸ್ವಲ್ಪ ವಿವರವಾಗಿ ಹೇಳುವಿರಾ?" ಎಂದು ಸೋಮಶೇಖರನು ಕೇಳಿದನು.

ಲಕ್ಷ್ಮೀಧರನು ನಿರುತ್ಸಾಹದ ಸ್ವರದಲ್ಲಿ, "ಏನು ಹೇಳಲಿ? ಸರಕುಗಳು ತುಂಬಿದ ನಾಲ್ಕು ಹಡಗುಗಳನ್ನು ಸಮುದ್ರದಲ್ಲಿ ಕಳುಹಿಸಿದ್ದೆ. ಅವುಗಳಲ್ಲಿ ಒಂದು ತುಫಾನಿನಲ್ಲಿ ಸಿಕ್ಕಿ ಪೂರ್ತಿ ಮುಳುಗಿ ಹೋಗಿ ಬಹು ದೊಡ್ಡ ನಷ್ಟವಾಯಿತು. ಸುಮಾರು ಐವತ್ತು ಲಕ್ಷ ಮುಳುಗಿತು" ಎಂದನು.

ಆಗ ಸೋಮಶೇಖರನು ಕಿರುನಗು ತೋರಿಸುತ್ತ, "ಅಂದರೆ ಉಳಿದ ಮೂರು ಹಡಗುಗಳೂ ಸುರಕ್ಷಿತವಾಗಿ ನಷ್ಟವೇನೂ ಆಗದಂತೆ ತೀರಕ್ಕೆ ಸೇರಿವೆ, ಹೌದಷ್ಟೆ?" ಎಂದನು. "ಹೌದು, ಸೇರಿವೆ" ಎಂದನು ಲಕ್ಷ್ಮೀಧರ.

"ನೋಡಿದಿರಾ! ನಾನು ಕೊಟ್ಟ ನೀಲ ಕಲ್ಮಣಿಯ ಪ್ರಭಾವದಿಂದ ನಿಮಗೆ ಶುಭವೇ ನಡೆದಿದೆ. ಆ ಸಂಗತಿಯನ್ನು ನೀವು ಗುರುತಿಸಲಿಲ್ಲ. ತುಫಾನಿಗೆ ಸಿಕ್ಕಿದ ನಾಲ್ಕೂ ಹಡಗುಗಳಲ್ಲಿ ಮೂರು ಹಡಗುಗಳು ಅಷ್ಟು ದೊಡ್ಡ ತುಫಾನಿನ ಏಟಿನಿಂದ ತಪ್ಪಿಸಿಕೊಂಡಿವೆ. ಸುಲಕ್ಷಣವಾಗಿ ತೀರ ಸೇರಿವೆ ಎಂದರೆ ಏನು ಅದರ ಅರ್ಥ? ಅದೇ ಆ ನೀಲಕಲ್ಲಿನ ಪ್ರಭಾವ! ಮೊದಲಿನ ನಿಮ್ಮ ಹವಳದ ಉಂಗುರವನ್ನೇ ಹಾಕಿಕೊಂಡಿದ್ದರೆ ತುಫಾನಿನ ಪೆಟ್ಟಿಗೆ ನಿಮ್ಮ ಎಲ್ಲಾ ಹಡಗುಗಳೂ ಮುಳುಗಿ ಇಷ್ಟು ಹೊತ್ತಿಗೆ ನೀವು ಬಿಕಾರಿಯಾಗಿ ತಿರುಗಬೇಕಿತ್ತು!" ಎಂದನು ಸೋಮಶೇಖರ.

ಲಕ್ಷ್ಮೀಧರನು ಉತ್ತರವೇನೂ ಹೇಳದೆ, ಗಂಭೀರ ಭಾವನೆಯಿಂದ, ನೀಲಕಲ್ಲಿನ ಉಂಗುರವನ್ನು ತೆಗೆದು ಸೋಮಶೇಖರನ ಮುಂದಿಟ್ಟು, ಸೀದಾ ತನ್ನ ಮನೆಗೆ ಹೋಗಿಬಿಟ್ಟನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ಎಲೈ ರಾಜನೇ, ಆ ನೀಲ ಕಲ್ಲಿನ ಉಂಗುರವನ್ನು ಧರಿಸಿದ ಲಕ್ಷ್ಮೀಧರನ ಮೂರು ಹಡಗುಗಳು ಸಮುದ್ರದಲ್ಲಿ ಮುಳುಗದೆ ದಡ ಸೇರಿವೆ. ಆ ಸಂಗತಿಯನ್ನು ಸೋಮಶೇಖರನು ಸ್ಪಷ್ಟವಾಗಿ ತಿಳಿಸಿದ್ದಾನೆ ಕೂಡಾ. ಆದರೆ ಲಕ್ಷ್ಮೀಧರನು ಸೋಮಶೇಖರನ ಮಾತನ್ನು ಅರ್ಥ ಮಾಡಿಕೊಂಡಂತೆ ಕಾಣುವುದಿಲ್ಲ. ಆದುದರಿಂದ ಮುಂದೆ ಇನ್ನೂ ಹೆಚ್ಚಿನ ನಷ್ಟಕ್ಕೆ ಗುರಿಯಾಗುವ ಸಂಭವ ಉಂಟಲ್ಲವೊ? ಹೀಗಿದ್ದೂ ಅವನು ಉಂಗುರವನ್ನು ಸೋಮಶೇಖರನಿಗೆ ಕೊಟ್ಟು ಹೋದುದು ಅವನ ಅಜ್ಞಾನದಿಂದ ತಾನೆ? ಅಥವಾ ಬುದ್ಧಿ ಕೆಟ್ಟಿರಬಹುದೆ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆದು ಚೂರುಚೂರಾಗುತ್ತದೆ" ಎಂದು ಸುಮ್ಮನಾಯಿತು. ಅದಕ್ಕೆ ತ್ರಿವಿಕ್ರಮನು ಹೀಗೆಂದನು:

"ಲಕ್ಷ್ಮೀಧರನು ಮೊದಲು ಚೆನ್ನಾಗಿರುತ್ತದೆಂದು ಕೊಂಡು ಹವಳದ ಉಂಗುರವನ್ನು ಮಾಡಿಸಿಕೊಂಡಿದ್ದಾನೆ. ಆಗ ಉಂಗುರದೊಳಗಿನ ಬಣ್ಣದ ಮಣಿಗೆ ಪ್ರಭಾವವಿರುವುದೆಂದು ಜನರು ಅಂದುಕೊಳ್ಳುವ ಸಂಗತಿ ಗೊತ್ತಿರಲಿಲ್ಲ. ಅಂತಹ ಕಲ್ಮಣಿಗಳಿಗೆ ಏನೋ ಅಲೌಕಿಕ ಶಕ್ತಿಗಳನ್ನು ಅಂಟಿಸಿ, ಅದರಲ್ಲಿ ಲಕ್ಷ್ಮೀಧರನಿಗೆ ನಂಬಿಗೆ ಬರುವಂತೆ ಮಾಡಿದವನು ಅವನ ಮಿತ್ರ. ಸಮುದ್ರದಲ್ಲಿ ತುಫಾನು ಏಳುವುದು ಪ್ರಕೃತಿ ಸಹಜವೇ, ಆ ಸಮಯದಲ್ಲಿ ಕೆಲವು ಹಡಗುಗಳು ಮುಳುಗುವುದೂ, ಕೆಲವು ಸುರಕ್ಷಿತವಾಗಿ ದಡ ಸೇರುವುದೂ ಸಹಾ ಸಹಜವೇ.

"ಆದರೆ ಸೋಮಶೇಖರನು ಬಹಳ ಬುದ್ಧಿವಂತನಾದ ವ್ಯಾಪಾರಿ. ಆಗಲೇ ಅಷ್ಟೋ ಇಷ್ಟೋ ಉಂಗುರದ ಕಲ್ಮಣಿಗಳ ಪ್ರಭಾವವನ್ನು ಕುರಿತು ಅವರಿವರಿಂದ ಕೇಳಿ ನಂಬಿಕೊಂಡವರ ಹೊರತು, ನಂಬಿಕೆ ಇಲ್ಲದವರು ತನ್ನ ಬಳಿಗೆ ಬರುವುದಿಲ್ಲವೆಂದು ಅವನಿಗೆ ಗೊತ್ತು. ಆ ನಂಬುಗೆಗೆ ಅನುಸಾರವಾಗಿ ತನ್ನ ತರ್ಕದಿಂದ, ಮಾತಿನ ಜಾಣ್ಮೆಯಿಂದ ಇನ್ನಷ್ಟು ಬಲಪಡಿಸುವನು. ತುಫಾನಿನಲ್ಲಿ ಸಿಕ್ಕಿಕೊಂಡ ನಾಲ್ಕು ಹಡಗುಗಳಲ್ಲಿ ಮೂರು ಸುರಕ್ಷಿತವಾಗಿ ತೀರವನ್ನು ಸೇರಿದುದೇ ನೀಲಕಲ್ಲಿನ ಪ್ರಭಾವವೆಂದು ಅವನು ಲಕ್ಷ್ಮೀಧರನಿಂದ ನಂಬಿಸಲು ನೋಡಿದನು. ಆಗಲಷ್ಟೇ ಲಕ್ಷ್ಮೀಧರನಿಗೆ ಸೋಮಶೇಖರನ ಕುತರ್ಕವು ಅರ್ಥವಾಯಿತು. ಇನ್ನೆಂದಾದರೂ ತುಫಾನಿನಲ್ಲಿ ತನ್ನ ಹಡಗುಗಳೆಲ್ಲ ಮುಳುಗಿ ಹೋದರೆ, ಸೋಮಶೇಖರನು ಕಾಲಗಮನದಿಂದ ಕಲ್ಲಿನ ಪ್ರಭಾವ ತಗ್ಗಿತೆನ್ನಬಹುದು, ಸ್ನಾನ ಊಟ, ತಿಂಡಿಗಳ ಕಾಲದಲ್ಲಿ ಅದನ್ನು ತಾನು ಅಪವಿತ್ರಗೊಳಿಸಿದೆನೆನ್ನಬಹುದು. ಇನ್ನೊಂದು ಬಣ್ಣದ ಕಲ್ಲನ್ನು ಹೊಗಳಿ ತನ್ನಿಂದ ಕೊಂಡುಕೊಳ್ಳಿಸಲೂ ಬಹುದು. ಅಸಲು ಇಷ್ಟೆಲ್ಲಾ ತಾನು ಮೊದಲು ಧರಿಸಿದ ಹವಳದ ಉಂಗುರಕ್ಕೆ ಅಂಟಿಸಿದ ಪ್ರಭಾವದಿಂದಲೇ ಪ್ರಾರಂಭವಾಯಿತು. ಆ ಮಿತ್ರನು ತನ್ನ ಮನಸ್ಸಿನಲ್ಲಿ ಅದುವರೆಗೂ ಇಲ್ಲದ ಅನುಮಾನದ ಬೀಜವನ್ನು ಬಿತ್ತಿಬಿಟ್ಟನು. ಯಾವ ಕಾರಣದಿಂದಾದರೂ ಮನುಷ್ಯನಲ್ಲಿ ಆತ್ಮವಿಶ್ವಾಸ ನಶಿಸಿದಾಗಲೇ ಮೂಢ ವಿಶ್ವಾಸಗಳಿಗೆ ದಾಸನಾಗುತ್ತಾನೆ. ಅದು ಮನುಷ್ಯನನ್ನು ಇಲ್ಲದ ಅನಾಹುತಗಳಿಗೆ ಗುರಿಪಡಿಸಿಬಿಡುತ್ತದೆ. ಇದನ್ನೆಲ್ಲಾ ತಿಳಿದುಕೊಂಡ ಲಕ್ಷ್ಮೀಧರನು ತನ್ನಲ್ಲಿ ಬಿದ್ದ ವಿಷಬೀಜವನ್ನು ಮೊಳಕೆಯಲ್ಲೇ ಕಿತ್ತುಹಾಕಿದ ಹಾಗೆ ವರ್ತಿಸಿದ್ದಾನೆ. ಇದರಲ್ಲಿ ಅಜ್ಞಾನವೂ ಇಲ್ಲ, ಬುದ್ಧಿಗೇಡಿತನವೂ ಇಲ್ಲ,"

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಮಾಯವಾಗಿತ್ತು !.






# ಅತಿರೇಕತೆ

ಅನೇಕ ವರ್ಷಗಳ ಹಿಂದೆ ಭದ್ರಶೀಲನೆಂಬ ಧರ್ಮಜ್ಞಾನಿಯೊಬ್ಬನಿದ್ದನು. ಅವನು ಊರಿಂದೂರಿಗೆ ತಿರುಗುತ್ತ ಸತ್ಯಧರ್ಮಗಳನ್ನು ಕುರಿತು ಪಾಮರ ಜನತೆಗೆ ಸುಲಭ ಗ್ರಾಹ್ಯವಾಗುವಂತೆ ಬೋಧಿಸುತ್ತಾ ಬರುವನು. ಅವನ ಮಾತುಗಳು ಆಕರ್ಷಣೀಯವಾಗಿರುವುದರಿಂದ ಅವನ ಉಪನ್ಯಾಸಗಳನ್ನು ಕೇಳಲು ಜನರೂ ಆಸ್ಥೆಯಿಂದ ಕೂಡುತ್ತಿದ್ದರು.

ಆತನೊಂದಿಗೆ ಕಂಕಣನೆಂದೂ, ಲೋಹಕನೆಂದೂ ಇಬ್ಬರು ಶಿಷ್ಯರಿದ್ದರು. ವೃದ್ಧಾಪ್ಯದ ದೆಸೆಯಿಂದಾಗಿ ಭದ್ರಶೀಲನು ಆಗಾಗ ಅನಾರೋಗ್ಯಕ್ಕೊಳಗಾಗಿ ಸಂಕಟಪಡುವನು.

ಹಾಗೆ ಅವನು ಅಸ್ವಸ್ಥತೆಯಲ್ಲಿದ್ದಾಗ ಅವನು ಬೋಧಿಸಬೇಕಾದ ಉಪನ್ಯಾಸದ ಬಾಧ್ಯತೆಯನ್ನು ಶಿಷ್ಯನಾದ ಕಂಕಣನಿಗೆ ಒಪ್ಪಿಸುತ್ತಿದ್ದನು. ಗುರುವಿನ ಆಶಯದಂತೆಯೇ ಬೋಧಿಸುವುದರಲ್ಲಿ ಕಂಕಣನು ಗಟ್ಟಿಗನು.

ತನಗೆ ಜನರ ಮುಂದೆ ನಿಂತು ಉಪನ್ಯಾಸ ಕೊಡುವ ಅವಕಾಶವನ್ನು ಗುರುಗಳು ಒಮ್ಮೆ ಕೂಡಾ ಕೊಡುವುದಿಲ್ಲವೆಂದು ಲೋಹಕನು ತನ್ನೊಳಗೇ ಕೊರಗಿಕೊಳ್ಳುವನು. ತಾನೂ ಕಂಕಣನಂತೆಯೇ, ಅವನಿಗಿಂತಲೂ ಚೆನ್ನಾಗಿ ಭಾಷಣ ಮಾಡಬಲ್ಲೆನೆಂಬ ಗಟ್ಟಿ ನಂಬುಗೆ ಅವನಿಗೆ.

ಕಡೆಗೆ ಒಂದು ದಿನ ಅವನು ಗುರು ಭದ್ರಶೀಲನೊಂದಿಗೆ "ಗುರುವರ್ಯಾ! ನೀವು ನನಗೆ ಏಕೋ ಉಪನ್ಯಾಸ ಕೊಡುವ ಅವಕಾಶ ಕೊಡುವುದೇ ಇಲ್ಲ. ಬಹುಶಃ ನನಗೆ ಧರ್ಮಶಾಸ್ತ್ರ ಪರಿಜ್ಞಾನ ಕಡಿಮೆಯಿರಬೇಕು. ಇಲ್ಲಾ ನಾನು ನಿಮಗೆ ಮಾಡುವ ಶುಶ್ರೂಷೆಯಲ್ಲಿ ಏನಾದರೂ ಲೋಪವಿರಬೇಕು. ಅಥವಾ ತಮಗೆ ಕಂಕಣನ ಮೇಲೆ ಪ್ರತ್ಯೇಕ ಅಭಿಮಾನವೋ ಏನೋ! ಜನರ ಮುಂದೆ ಒಂದು ಸಾರಿ ಕೂಡಾ ನನ್ನ ಪರಿಜ್ಞಾನ ತೋರಿಸಲು ಅವಕಾಶ ಕೊಡಲೇ ಇಲ್ಲ. ಹೀಗೆ ಹೇಳಿದೆನೆಂದು ನನ್ನ ಮೇಲೆ ಸಿಟ್ಟಾಗಬಾರದು ಸ್ವಾಮೀ!" ಎಂದನು.

ಇದನ್ನು ಕೇಳಿ ಭದ್ರಶೀಲನು ಮಂದಹಾಸ ತೋರಿಸಿ, "ಲೋಹಕಾ, ನಿನಗೆ ಧರ್ಮಶಾಸ್ತ್ರದಲ್ಲಿ ಎಷ್ಟೊಂದು ಪರಿಚಯವಿದೆ ಎಂದು ನನಗೆ ಚೆನ್ನಾಗಿ ಗೊತ್ತಿದೆ. ನಿಜ ಹೇಳುವುದಾದರೆ ನೀನು ಕಂಕಣನಿಗಿಂತಲೂ ಹೆಚ್ಚಿಗೇ ತಿಳಿದವನು" ಎಂದನು.

ಜೆ. ರತ್ನ

ಗುರುವಿನ ಬಾಯಿಯಿಂದ ಹೊರಟ ಮಾತು ಕೇಳಿ ಲೋಹಕನಿಗೆ ಸಂತೋಷವಾಯಿತು. ಭದ್ರಶೀಲನು ಸ್ವಲ್ಪ ತಡೆದು ಮಾತು ಮುಂದುವರಿಸುತ್ತ, "ಸಾಮಾನ್ಯ ಜನರಿಗೆ ಶಾಸ್ತ್ರಗಳೊಳಗಿನ ಧರ್ಮ ಸೂಕ್ಷ್ಮಗಳನ್ನು ಮನಮುಟ್ಟುವ ಹಾಗೆ ಹೇಳಲು ಸಾಧ್ಯವಾಗಬೇಕು. ಹಾಗೆ ಹೇಳುವಾಗ ಜನರು ವಿಪರೀತವಾಗಿ ಅರ್ಥಮಾಡಿಕೊಂಡು ನಾವು ಆಶಿಸುವ ಪರಿಣಾಮಕ್ಕೆ ವಿರುದ್ಧವಾಗಿ ಪ್ರವರ್ತಿಸುವ ಅಪಾಯ ವಿದೆ. ನೀನು ಉಪನ್ಯಾಸಕನಾಗುವುದಕ್ಕಿಂತಲೂ. ವಿಮರ್ಶಕನಾಗಿ, ವ್ಯಾಖ್ಯಾನಗಾರನಾಗಿ ಬೆಳಗುವವನೆಂದು ನನ್ನ ಅಭಿಪ್ರಾಯ. ನೀನು ಸೂಕ್ಷ್ಮ ವಿಷಯಗಳನ್ನು ಚೆನ್ನಾಗಿ ಗುರುತಿಸುವೆ. ಅಷ್ಟೇ ಹೊರತು ಬೇರೆ ಪಕ್ಷಪಾತವೇನೂ ನನಗಿಲ್ಲ" ಎಂದು ವಿವರಿಸಿದನು.

ಅದನ್ನು ಕೇಳಿ ಲೋಹಕನು ಸಣ್ಣ ಮೋರೆ ಮಾಡಿಕೊಂಡು, "ಗುರುವರ್ಯಾ, ಒಂದು ಸಾರಿ ಕೂಡಾ ನನಗೆ ಜನರ ಮುಂದೆ ಮಾತಾಡುವ ಅವಕಾಶವನ್ನೇ ಕೊಡದೆ ಪ್ರತ್ಯಕ್ಷ ಪರೀಕ್ಷಿಸದೆ, ನನ್ನನ್ನು ಕುರಿತು ಹೀಗೆ ಅಭಿಪ್ರಾಯಪಡುವುದು ಸರಿಯಾದೀತೆ ?" ಎಂದನು.

ಭದ್ರಶೀಲನು ಸ್ವಲ್ಪಹೊತ್ತು ಆಲೋಚಿಸಿ, "ಸರಿಯಪ್ಪ. ನಿನ್ನಲ್ಲಿರುವ ಸಂಶಯಗಳನ್ನು ತೊಲಗಿಸಲಿಕ್ಕಾಗಿ, ಈ ದಿನ ಸಾಯಂಕಾಲ ನಾನು ಸಿರಿಪುರದ ಪ್ರಾಂಗಣದಲ್ಲಿ ಕೊಡಲಿರುವ ಉಪನ್ಯಾಸವನ್ನು ನನಗೆ ಗಂಟಲು ಸರಿಯಿಲ್ಲವೆಂದು ಹೇಳಿ ನಿನಗೆ ಒಪ್ಪಿಸುತ್ತೇನೆ. ಆದಕ್ಕೆ ವಿಷಯ ಸಂಗ್ರಹಪಡಿಸಿಕೊಂಡು ಸಿದ್ಧನಾಗಿರು" ಎಂದನು.

ಗುರುಗಳು ಹೀಗೆ ಹೇಳಿದುದನ್ನು ಕೇಳಿ ಲೋಹಕನಿಗೆ ಬಹಳ ಸಂತೋಷವಾಯಿತು. ಆ ದಿನ ಸಾಯಂಕಾಲದಲ್ಲಿ ಸಿರಿಪುರದ ಶಿವಾಲಯದ ಪ್ರಾಂಗಣದಲ್ಲಿ ಲೋಹಕನು ಗ್ರಾಮಸ್ಥರ ಮುಂದೆ ನಿಂತು "ಧನಮೂಲಮಿದಂ ಜಗತ್" ಎಂಬ ವಿಷಯವನ್ನು ಖಂಡಿಸುತ್ತ ಉಪನ್ಯಾಸ ಹೇಳಲು ಪ್ರಾರಂಭಿಸಿದನು. ಮನುಷ್ಯನು ಸುಖವಾಗಿ ಬದುಕಲಿಕ್ಕೆ ಹಣವು



ಪ್ರಧಾನವಲ್ಲವೆಂದೂ, ಅದು ಚಿಂತೆಗೆ ಕಾರಣವಾಗುವಂತಹುದೆಂದೂ ಅನೇಕ ಉದಾಹರಣೆಗಳನ್ನು ಕೊಟ್ಟು ಒಂದು ಗಂಟೆ ಹೊತ್ತು ಭಾಷಣ ಮಾಡುತ್ತ ಬಂದನು. ಅವನು ಹೇಳುವ ವಿಷಯಗಳು ಅಲ್ಲಿ ಸೇರಿದವರಿಗೆ ಮಾತ್ರವಲ್ಲದೆ ಭದ್ರಶೀಲನಿಗೂ ಬೇಸರ ತರುವಂತಾಗುತ್ತಿತ್ತು. ಹೇಳಿದ್ದನ್ನೇ ಬಿಡಿಸಿ ಬಿಡಿಸಿ ಹೇಳುವ ರೀತಿ ಸಾಕು ಸಾಕೆನಿಸಿತು.

ಹಾಗೆ ಸ್ವಲ್ಪಹೊತ್ತು ನಡೆದ ಮೇಲೆ ಲೋಹಕನು ಸ್ವಲ್ಪಹೊತ್ತು ನಿಂತು, ಅಲ್ಲಿರುವ ಜನರನ್ನು ಉದ್ದೇಶಿಸಿ, "ಹಣದಿಂದ ನಾವು ಎಲ್ಲವನ್ನೂ ಕೊಂಡುಕೊಳ್ಳಲಾರೆವೆಂದು ಈಗ ನಿಮಗೆಲ್ಲರಿಗೂ ಅರ್ಥವಾಗಿರಬೇಕಲ್ಲವೇ ?" ಎಂದು ಪ್ರಶ್ನಿಸಿದನು.

ಜನರಲ್ಲಿ ಕೆಲವರು "ಆಹಾ ! ಬಹಳ ಚೆನ್ನಾಗಿ ಅರ್ಥವಾಯಿತು" ಎಂದು ಇನ್ನು ಸಾಕುಮಾಡುವಂತೆ ಗಟ್ಟಿಯಾಗಿ ಚಪ್ಪಾಳೆ ತಟ್ಟಿದರು.

ಲೋಹಕನು ಅದನ್ನು ಲಕ್ಷ್ಯಕ್ಕೆ ತಾರದೆ, ಎರಡರಷ್ಟು ಉತ್ಸಾಹದಿಂದ "ಹಣದಿಂದ ನಾವು ಸಂತೋಷವನ್ನು ಕಂಡುಕೊಳ್ಳಲು ಸಾಧ್ಯವೇ ? ಆಪ್ಯಾಯತೆಗೆ ಬೆಲೆ ಕಟ್ಟಲು ಆಗುತ್ತದೆಯೇ ?" ಎಂದು ಮುಂದೆ ಕುಳಿತಿದ್ದ ಒಬ್ಬನನ್ನು ಕರೆದು, "ಅಪ್ಪಾ, ನಾನು ನಿನಗೆ ಸಾವಿರ ವರಹಗಳನ್ನು ಕೊಟ್ಟು, ನಿನ್ನ ತಂದೆತಾಯಿಗಳ ಮೇಲೆ ಅಸಹ್ಯ ತೋರಿಸು, ಎಂದು ಹೇಳಿದರೆ ಹಾಗೆ ಮಾಡುವಿಯಾ ?" ಎಂದು ಕೇಳಿದನು.

ಆ ಪ್ರಶ್ನೆಗೆ ಅವನು ಏನೂ ತೋರದವನಂತೆ ಆಚೀಚೆ ನೋಡಿದನು. ಅಷ್ಟರಲ್ಲಿ ಅವನ ಪಕ್ಕದಲ್ಲಿ ಕುಳಿತವನು ಎದ್ದುನಿಂತು, "ನನ್ನ ಸೋದರಮಾವನನ್ನು ಅಸಹ್ಯಪಡಬೇಕೆಂದು ಹೇಳಿದರೆ ನಾನು ಆ ಕೆಲಸ ಮಾಡುತ್ತೇನೆ. ಇದಕ್ಕೆ ನನಗೆ ಎಷ್ಟು ಹಣ ಕೊಡುವಿರಿ ?" ಎಂದು ಕೇಳಿದನು.

ಅದನ್ನು ಕೇಳಿ ಎಲ್ಲರೂ ದೊಡ್ಡ ದನಿಯಿಂದ ನಗಾಡಿದರು. ಲೋಹಕನು ಮರದ ಹಾಗೆ ಸುಮ್ಮನೆ ನಿಂತುಬಿಟ್ಟನು.

ಆಗ ಭದ್ರಶೀಲನು ಲೋಹಕನ ಭುಜವನ್ನು ತಟ್ಟಿ, "ಉಪನ್ಯಾಸ ಭಾಷಣ ಮಾಡಲು ನಿನಗೇಕೆ ಅವಕಾಶ ಕೊಡಲಿಲ್ಲವೆಂಬುದಕ್ಕೆ ಕಾರಣ ಈಗ ಅರ್ಥವಾಯಿತೆ ? ನಿನಗೆ ಹೆಚ್ಚಾದ ಶಾಸ್ತ್ರ ಪರಿಜ್ಞಾನವಿರುವುದು ನಿಜ. ಅದನ್ನು ವಿಪುಲೀಕರಿಸಿ ಹೇಳುವುದರಲ್ಲಿ ಅತಿರೇಕತನವಿದೆ. ಅದು ನನಗೆ ಗೊತ್ತಿತ್ತು. ನಿನಗೂ ಗೊತ್ತಾಯಿತಷ್ಟೆ ?" ಎಂದನು.

ಲೋಹಕನು ಗುರುವಿಗೆ ಉತ್ತರ ಕೊಡಲಾಗದೆ ತಲೆ ತಗ್ಗಿಸಿಕೊಂಡನು. ಆಮೇಲೆ ಅವನು ಉಪನ್ಯಾಸ ಭಾಷಣಗಳ ಗೊಡವೆಗೆ ಹೋಗದೆ, ಒಳ್ಳೆಯ ವ್ಯಾಖ್ಯಾನಕರ್ತನಾಗಿ ಹೆಸರು ಪಡೆದನು.





# ಪರಿಚಾರಿಕೆಯ ನಗು

ಅನೇಕ ವರ್ಷಗಳ ಹಿಂದೆ ಶಿವಪುರ, ಸ್ವರ್ಣಪುರ ಎಂಬ ಎರಡು ದೇಶಗಳ ನಡುವೆ ತಾತನ ಕಾಲದಿಂದಲೂ ಹಗೆಯ ತಗಾದೆ ಅಂಟಿಕೊಂಡೇ ಬರುತ್ತಿತ್ತು. ಆದುದರಿಂದ ಎರಡು ರಾಜ್ಯಗಳ ರಾಜರೂ ಎಡಮುಖ ಬಲಮುಖವಾಗಿಯೇ ನಡೆದುಕೊಳ್ಳುತ್ತಿದ್ದರು. ಬಲಗಳಲ್ಲಿ ಆ ಎರಡು ರಾಜ್ಯಗಳೂ ಸರಿಸಮಾನವಾಗಿಯೇ ಇದ್ದುವು.

ಆದರೆ ಎಲ್ಲಾ ಕಾಲದಲ್ಲಿಯೂ ಒಂದೇ ರೀತಿಯಾಗಿರಲು ಸಾಧ್ಯವಾಗದಷ್ಟೆ ? ಕ್ರಮವಾಗಿ ಸ್ವರ್ಣಪುರವು ಆರ್ಥಿಕವಾಗಿಯೂ ಅದನ್ನನುಸರಿಸಿ ಸೈನಿಕ ರೀತಿಯಲ್ಲಿಯೂ ಬಲಹೀನವಾಗುತ್ತಾ ಬಂದಿತು. ಆಗ ಸ್ವರ್ಣಪುರದ ರಾಜ ವಿಷ್ಣುಸೇನನು ಶಿವಪುರದಿಂದ ಬರಲಿರುವ ಯುದ್ಧದ ಅಪಾಯವನ್ನು ಕುರಿತೇ ಆಲೋಚನೆ ಮಾಡತೊಡಗಿದನು.

ಶಿವಪುರದ ರಾಜನಾದ ಶಿವಸೇನನಿಗೆ ಯುಕ್ತ ವಯಸ್ಸಿಗೆ ಬಂದ ಕುಮಾರನೊಬ್ಬನಿದ್ದನು. ವಿಷ್ಣುಸೇನನಿಗೆ ರತ್ನಮಂಜರಿ ಎಂಬ ಸೌಂದರ್ಯವತಿಯಾದ ಕುಮಾರಿ ಇದ್ದಳು. ತನ್ನ ಕುಮಾರಿಯನ್ನು ಶಿವಸೇನನ ಕುಮಾರನಿಗೆ ಕೊಟ್ಟು ವಿವಾಹ ನಡೆಯಿಸಿಬಿಟ್ಟರೆ, ಯುದ್ಧದ ಅಪಾಯ ಬರಲಾರದು. ಹೀಗೆ ಆಲೋಚನೆ ಮಾಡಿ ವಿಷ್ಣುಸೇನನು ತಾನು ಶಿವಸೇನನೊಂದಿಗೆ ನೆಂಟಸ್ತಿಕೆ ನಡೆಸಲು ಆಲೋಚನೆ ಮಾಡಿರುವೆನೆಂದು ದೂತನ ಮೂಲಕವಾಗಿ ವರ್ತಮಾನ ಕಳುಹಿಸಿದನು. ಆದರೆ ಆಗಲೇ ಶಿವಸೇನನ ಕುಮಾರನಾದ ವಿಜಯನು ರತ್ನಮಂಜರಿಯ ಅಸಮಾನ ಸೌಂದರ್ಯವನ್ನು ಕುರಿತು ಕೇಳಿ, ಅವಳನ್ನು ವಿವಾಹ ಮಾಡಿಕೊಳ್ಳುವ ಆಲೋಚನೆಯಲ್ಲಿದ್ದನು. ಇಂತಹ ಮಗನ ಹೊಲಬನ್ನು ತಿಳಿದಿದ್ದ ಶಿವಸೇನನು, ವಿಷ್ಣುಸೇನನು ಕಳುಹಿಸಿದ ದೂತ ವಾರ್ತೆಯನ್ನು ಕೇಳಿ ಒಪ್ಪಿಕೊಂಡನು.

ವಿವಾಹಕ್ಕೆ ಮೊದಲು ಶಿವಸೇನನು ಎಲ್ಲಾ ವಿವರಗಳನ್ನೂ ಮಾತಾಡಲಿಕ್ಕಾಗಿ ವಿಷ್ಣುಸೇನನನ್ನು ಗೌರವದಿಂದ ಆಹ್ವಾನಿಸಿ ಔತಣವನ್ನು ಏರ್ಪಡಿಸಿದನು. ಔತಣ ಸಮಾರಂಭಕ್ಕೆ ವಿಷ್ಣುಸೇನನು ತನ್ನ ಪತ್ನಿ ಜಯಂತೀದೇವಿ, ಕುಮಾರಿ ರತ್ನಮಂಜರಿಯರನ್ನು ಸಹಾ ಕರೆದುಕೊಂಡು ಬಂದಿದ್ದನು.

ಔತಣದ ಭೋಜನವು ನಡೆಯಲಾರಂಭಿಸಿತು. ಪರಿಚಾರಿಕೆಯರು ವಿಧವಿಧವಾದ ಭಕ್ಷ್ಯಗಳನ್ನು

ಎಸ್. ನಾಗೇಶ್ವರರಾವ್



ಬಡಿಸುತ್ತಿದ್ದರು. ಆ ಸಮಯದಲ್ಲಿ ಮಾಲತಿ ಎಂಬ ಪರಿಚಾರಿಕೆ ಬಡಿಸಿಕೊಂಡು ಬರುತ್ತ ಥಕ್ಕನೆ ನೆಗಾಡಿದಳು. ಆ ನಗುವಿನ ಶಬ್ದ ಎಲ್ಲರಿಗೂ ಕೇಳಿಸಿ, ಎಲ್ಲರೂ ಮೆಟ್ಟಿಬಿದ್ದಂತಾದರು. ಮೆಟ್ಟಿಬಿದ್ದ ಒಬ್ಬೊಬ್ಬರಿಗೂ ಗೊತ್ತಿರುವ ಒಂದೊಂದು ಕಾರಣವಿದ್ದಿತು.

ವಿಷ್ಣುಸೇನನಿಂದ ಉಡುಗೊರೆ ಕಾಣಿಕೆಗಳ ರೂಪದಲ್ಲಿ ಏನೇನನ್ನು ಬರಮಾಡಿಸಿಕೊಳ್ಳಬೇಕೆಂದು ಶಿವಸೇನನು ತನ್ನ ಪತ್ನಿಯೊಂದಿಗೆ ವಾದ ವಿವಾದ ಮಾಡಿದ್ದನು. "ಇಷ್ಟೊಂದು ಧನವಿದ್ದ ರಾಜನಿಗೆ ಇನ್ನಿಷ್ಟು ಸಂಪಾದಿಸಬೇಕೆಂಬ ಆಶೆ!" ಎಂದುಕೊಂಡು ಆ ಪರಿಚಾರಿಕೆ ನಕ್ಕಿರಬೇಕೆಂದು ಶಿವಸೇನನಿಗೆ ತೋರಿತು.

ಶಿವಸೇನನ ಹೆಂಡತಿ ಶಾರದಾದೇವಿಗೆ ಮಾತಾಡುವಾಗ ಸ್ವಲ್ಪ ಉಗ್ಗು ಬರುತ್ತಿತ್ತು. ಆದುದರಿಂದ ಅವಳು ನೆಂಟಸ್ತಿಕೆಯ ಹೆಂಗುಸರ ಮುಂದೆ ಬಾಯಿ ಮುಚ್ಚಿಬಿಮ್ಮಗೆ ನಡೆದಾಡಿಕೊಂಡಿದ್ದಳು. ಈ ಸಂಗತಿಯನ್ನು ನೆನೆದು ಮಾಲತಿ ನಕ್ಕಳೇನೋ ಎಂದು ಶಾರದಾದೇವಿ ಮೆಟ್ಟಿಬಿದ್ದಳು.

ವಿಷ್ಣುಸೇನನ ಆಲೋಚನೆ ಬೇರೆ ವಿಧವಾಗಿದ್ದಿತು. ಶಿವಸೇನನಿಂದ ಬರಲಿರುವ ಯುದ್ಧದ ಅಪಾಯವನ್ನು ಅನುಮಾನಿಸಿ, ಯುದ್ಧ ನಡೆದರೆ ತಾನು ಸೋಲುವೆನೆಂದು ಹೆದರಿಯೇ ನೆಂಟಸ್ತಿಕೆಯನ್ನು ಬಯಸಿ ಬಂದ ಸಂಗತಿ ಆ ಪರಿಚಾರಿಕೆಗೆ ಗೊತ್ತಾಯಿತೇನೋ ಎಂದುಕೊಂಡು ವಿಷ್ಣುಸೇನನೂ ಮೆಟ್ಟಿಬಿದ್ದು ಮುಖ ಮುದುಡಿಕೊಂಡನು.

ವಿಷ್ಣುಸೇನನ ಹೆಂಡತಿ ಜಯಂತೀದೇವಿಗೆ ತಲೆಯ ಕೆಲವು ಕೂದಲುಗಳು ಬೆಳ್ಳಗಾಗಿದ್ದುವು. ಅದು ತಿಳಿಯದಂತೆ ಕಪ್ಪುಬಣ್ಣ ಹಚ್ಚಿಕೊಳ್ಳುವ ಅಭ್ಯಾಸ ಅವಳಿಗಿತ್ತು. ಔತಣಕ್ಕೆ ಬರುವ ಗಡಿಬಿಡಿಯಲ್ಲಿ ಅವಳು ಬಣ್ಣ ಹಚ್ಚಿಕೊಳ್ಳುವುದರಲ್ಲಿ ಅಷ್ಟು ಶ್ರದ್ಧೆ ತೋರಿಸಲಿಲ್ಲ. ತಾನು ತಲೆ ಕೂದಲಿಗೆ ಬಣ್ಣ ಹಚ್ಚಿಕೊಳ್ಳುವುದನ್ನು ತಿಳಿದು ಪರಿಹಾಸವಾಗಿ ನಕ್ಕಳೇನೋ ಎಂದುಕೊಂಡು ನಾಚಿ ಅವಳು ಮೆಟ್ಟಿಬಿದ್ದಳು.

ರಾಜಕುಮಾರಿ ರತ್ನಮಂಜರಿ ಅಡಿಗಡಿಗೂ ರಾಜಕುಮಾರ ವಿಜಯನನ್ನು ಕಡೆಗಣ್ಣಿನಿಂದ ಕದ್ದು ಕದ್ದು ನೋಡುತ್ತಿದ್ದಳು. ಅದನ್ನು ಕಂಡುಹಿಡಿದೇ ಪರಿಚಾರಿಕೆ ನಕ್ಕಳೆಂದುಕೊಂಡು ರತ್ನಮಂಜರಿ ಮೆಟ್ಟಿಬಿದ್ದು ತಲೆಯನ್ನು ಪಕ್ಕಕ್ಕೆ ತಿರುಗಿಸಿಕೊಂಡಳು,

ರಾಜಕುಮಾರ ವಿಜಯನೂ ಮೆಟ್ಟಿಬಿದ್ದನೆಂದರೆ ಮತ್ತೊಂದು ಕಾರಣವಿದ್ದಿತು. ಅವನು ರಾಜಕುಮಾರಿಯೊಂದಿಗೆ ಏಕಾಂತದಲ್ಲಿ ಮಾತಾಡಬೇಕೆಂದು ತನ್ನ ಮಿತ್ರನೊಂದಿಗೆ ಅವಳಿಗೆ ಸುದ್ದಿ ಕಳುಹಿಸಲು ಸಮಯ ಕಾಯುತ್ತಿದ್ದನು. ಈ ಸಂಗತಿ ಕಂಡುಹಿಡಿದು ಮಾಲತಿ ನಕ್ಕಳೆಂದು ಅವನಿಗೆ ತೋರಿ ಮೆಟ್ಟಿಬಿದ್ದನು.

ಶಿವಸೇನನ ಮಂತ್ರಿಯಾದ ಸುಧರ್ಮನು ಅತ್ಯಂತ ನಿಶಿತ ಬುದ್ಧಿಯುವನಾಗಿದ್ದನು. ಅವನು ಔತಣದಲ್ಲಿ ಭೋಜನಮಾಡುತ್ತಿರುವ ಎಲ್ಲರಲ್ಲಿಯೂ ಆಕಸ್ಮಾತ್ತಾಗಿ

ಬಂದ ಮಾರ್ಪಾಡನ್ನು ನೋಡಿಬಿಟ್ಟನು. ಪರಿಚಾರಿಕೆ ಮಾಲತಿ ನಗುವುದಕ್ಕೂ, ಅದೊಂದು ಕ್ಷಣಿಕ ಪರಿಣಾಮವನ್ನು ಎಲ್ಲರಲ್ಲಿಯೂ ಬೀರಿದುದಕ್ಕೂ ಅವರವರ ಮನೋಭಾವವೇ ಕಾರಣವೆಂದು ಮಂತ್ರಿಗೆ ಗೊತ್ತಾಯಿತು. ನಿಜ ಕಾರಣ ಬೇರೆಯೇ ಇರಬೇಕೆಂದು ಅವನಿಗೆ ಅನಿಸಿತು.

ಸ್ವಲ್ಪ ಹೊತ್ತಿಗೆ ಔತಣದ ಭೋಜನ ಮುಗಿಯಿತು. ಸುಧರ್ಮನು ಮಾಲತಿಯನ್ನು ತನ್ನ ಬಳಿಗೆ ಕರೆದು, " ಮಾಲತೀ, ಔತಣದಲ್ಲಿ ಬಡಿಸುವಾಗ ನೀನು ಥಕ್ಕನೆ ಹಾಗೆ ನೆಗಾಡಲು ಕಾರಣವೇನು ? " ಎಂದು ಪ್ರಶ್ನಿಸಿದನು.

ಆಗ ಎಲ್ಲರೂ ಅಲ್ಲಿಯೇ ಇದ್ದರು. ಮಾಲತಿ ತಮ್ಮನ್ನು ಕುರಿತೇ ಹೇಳುವಳೆಂದುಕೊಂಡು ಪ್ರತಿಯೊಬ್ಬರೂ ಅವಳನ್ನು ಬಿಸಿನೋಟದಿಂದಲೇ ನೋಡುತ್ತಿದ್ದರು. ಆದರೆ ಮಾಲತಿ ಕಾರಣ ಹೇಳಲು ಸಂಕೋಚಪಟ್ಟು, ಬಾಯಿಬಿಗಿದು ಸುಮ್ಮನಿದ್ದಳು.

ಆಗ ಸುಧರ್ಮನು, " ನೋಡು ಮಾಲತೀ, ನಿನ್ನ ನಗುವಿಗೆ ಇಲ್ಲಿ ಇರುವವರು ಏನೇನೋ ಕಾರಣವನ್ನು ಊಹಿಸಿ ನೋಡಿಕೊಳ್ಳುವ ಅವಕಾಶವಿದೆ. ನಾನು ಊಹಿಸುವುದೇನೆಂದರೆ, ನೀನು ನಿನಗೆ ಸಂಬಂಧಿಸಿದ ಯಾವುದೋ ವಿಷಯವನ್ನು ನೆನೆದು ಹಾಗೆ ಥಕ್ಕನೆ ನಕ್ಕಿರಬೇಕು ಅಂತ. ಏಕೆಂದರೆ ಔತಣಕ್ಕೆ ಬಂದವರನ್ನು ನೋಡಿ ನಗುವಷ್ಟು ಧೈರ್ಯ ಸೇವಕಳಾದ ನಿನಗೆ ಇರಲಾರದು. ಯಾವುದಕ್ಕೂ ನೀನು ನೆಗಾಡಿದ ಕಾರಣ ಹೇಳಿ ತೀರಬೇಕು " ಎಂದನು.

ಮಾಲತಿ ನಾಚಿಕೆಯಿಂದ ತಲೆ ತಗ್ಗಿಸಿಕೊಂಡು, " ತಾವು ಊಹಿಸಿದ್ದು ನಿಜವೇ ಮಹಾಪ್ರಭೂ. ನನ್ನ ಗಂಡನಿಗೆ ಮರೆವು ತುಂಬ ಜಾಸ್ತಿ. ಹೊಸ ಬಳೆಗಳನ್ನು ತರಬೇಕೆಂದು ಅನೇಕ ದಿನಗಳಿಂದ ಹೇಳಿಕೊಂಡೇ ಇದ್ದೇನೆ. ಮರೆತು ಮರೆತು ಹೋಗುತ್ತಾನೆ. ಇನ್ನು ಹೇಳಿ ಪ್ರಯೋಜನವಿಲ್ಲವೆಂದು ಈ ದಿನ ಮರೆಯದೆ ಹೊಸ ಬಳೆ ತರಲೇಬೇಕೆಂದು ಹೇಳಿ ನನ್ನ ಹಳೆಯ ನಾಲ್ಕು ಬಳೆಗಳನ್ನು ಅವನ ಕೈಗೆ ತಗಲಿಸಿದ್ದೆ. ಆದರೂ ಮರಗೂಳಿತನದಿಂದ ಅದನ್ನೂ ಮರೆತು ಬಳೆಗಳಿರುವ ಕೈಯಿಂದಲೇ ಅಂತಃಪುರದ ಕಾವಲು ಕೆಲಸಕ್ಕೆ ಬಂದಿದ್ದಾನೆ " ಎಂದು ಪಹರೆಯವನಾದ ಮಲ್ಲಯ್ಯನನ್ನು ನೋಡಿ, ಕಿಸಕ್ಕನೆ ಬರುವ ನಗುವನ್ನು ಒತ್ತಿ ಮುಖ ಮುಚ್ಚಿಕೊಂಡಳು.

ಮಲ್ಲಯ್ಯನ ಕೈಯಲ್ಲಿರುವ ಬಳೆಗಳನ್ನು ನೋಡಿದ ಕೂಡಲೇ ಪರಿಚಾರಿಕೆಯ ನಗುವಿಗೆ ಕಾರಣವೇನೆಂದು ಎಲ್ಲರಿಗೂ ಅರ್ಥವಾಗಿ ಹೋಯಿತು. ಅದರಿಂದ ಎಲ್ಲರ ಅನುಮಾನಗಳೂ ತೀರಿಹೋಗಿ ನಿರ್ಮಲ ಭಾವದಿಂದ ನೆಗಾಡಿದರು. ಈಗ ಒಂದೇ ಬಗೆಯ ಸಂತೋಷ ಎಲ್ಲರಿಗೂ.






# ವಿಶ್ವಾಸಘಾತ

ಹಿಂದೆ ಬ್ರಹ್ಮದತ್ತ ರಾಜನು ಕಾಶೀ ರಾಜ್ಯವನ್ನು ಪರಿಪಾಲಿಸಿಕೊಂಡಿದ್ದ ಕಾಲದಲ್ಲಿ, ಒಂದು ಸಾರಿ ಐನೂರು ಮಂದಿ ವರ್ತಕರು ಒಂದು ನೌಕೆಯಲ್ಲಿ ಸಮುದ್ರದ ಮೇಲೆ ಪ್ರಯಾಣ ಹೊರಟರು. ಹಾಗೆ ಹೋಗುತ್ತಿರುವಾಗ ನಡುಸಮುದ್ರದಲ್ಲೆದ್ದ ತೀವ್ರವಾದ ತುಫಾನಿನಿಂದಾಗಿ ನೌಕೆ ಸಮುದ್ರದಲ್ಲಿ ಮುಳುಗಿಹೋಯಿತು. ನೌಕೆಯಲ್ಲಿದ್ದವರಲ್ಲಿ ಒಬ್ಬನೇ ಒಬ್ಬನ ಹೊರತು ಉಳಿದವರೆಲ್ಲ ಜಲಚರಗಳಿಗೆ ಎರೆಯಾಗಿಹೋದರು. ಕರಂಬಿಯ ಎಂಬವನೊಬ್ಬನೇ ಸಮುದ್ರ ತೀರದ ನಗರದಲ್ಲಿ ನೆಲಕ್ಕೆ ತಳ್ಳಲ್ಪಟ್ಟು, ಬದುಕಿಕೊಂಡನು. ಅವನು ತಿಂಡಿ ಬಟ್ಟೆಗಳ ದಾರಿ ಕಾಣದೆ ಭಿಕ್ಷೆ ಬೇಡುತ್ತಾ, ತಿರುಗತೊಡಗಿದನು.

ಅಲ್ಲಿಯ ಜನರು ಅವನ ದುಸ್ಥಿತಿಯನ್ನು ನೋಡಿ ಬಹಳ ಕನಿಕರಪಟ್ಟು, ಅವನಿಗೆ ಬೇಕಾದ ಎಲ್ಲಾ ವಸ್ತುಗಳನ್ನೂ ತಂದುಕೊಡಲು ನೋಡಿದರು. ಅವನ್ನೆಲ್ಲ ನೋಡಿ ಅವನು, "ಇವೆಲ್ಲಾ ನನಗೇಕೆ? ಒಂದು ತುಂಡು ಬಟ್ಟೆಯೂ, ಒಂದು ಮುಷ್ಟಿ ಆಹಾರವೂ ಸಿಕ್ಕಿದರೆ ಸಾಕು" ಎಂದು ಹೇಳಿ ಜನರು ಕೊಟ್ಟ ವಸ್ತುಗಳನ್ನೆಲ್ಲಾ ನಿರಾಕರಿಸಿಬಿಟ್ಟನು. ಅದನ್ನು ನೋಡಿ ಅಲ್ಲಿಯ ಪ್ರಜೆಗಳು, "ಓಹೋ! ಇವನಾವನೋ ಮಹಾವಿರಾಗಿ. ದೊಡ್ಡ ತಪಸ್ವಿ!" ಎಂದುಕೊಂಡು ಅವನಿಗೆ ಒಂದು ಪರ್ಣಶಾಲೆಯನ್ನು ಕಟ್ಟಿಕೊಟ್ಟು, ತಪಸ್ಸಿನಲ್ಲಿರಲು ಹೇಳಿದರು.

ಅವನು ಪರ್ಣಶಾಲೆಯಲ್ಲೇ ಇದ್ದು ಧ್ಯಾನ ಮಾಡಲು ತೊಡಗಿದನು. "ಕರಂಬಿಯ ಮಹಾಮುನಿ" ಎಂದು ತನ್ನನ್ನು ಕರೆಯಿಸಿಕೊಂಡನು. ಎಲ್ಲರೂ ಅವನನ್ನು ಬಹು ಗೌರವದಿಂದ ನೋಡುತ್ತಿದ್ದರು. ಅವನ ದರ್ಶನಕ್ಕಾಗಿ ಅನೇಕ ಮಂದಿ ರಾಜರು ಕೂಡಾ ಬರುತ್ತಿದ್ದರು. ಹಾಗೆ ಕರಂಬಿಯ ಮುನಿಯ ಸ್ನೇಹ ಸಂಪಾದಿಸಿದವರಲ್ಲಿ ಹಾವುಗಳ ರಾಜನಾದ ಪಂಡರಕನೂ, ಗರುಡರ ರಾಜನಾಗಿ ಜನಿಸಿದ ಬೋಧಿಸತ್ವನೂ ಇದ್ದರು.

ಒಂದು ದಿನ ಗರುಡರಾಜನು ಬಂದು ಕರಂಬಿಯ ಮುನಿಗೆ ನಮಸ್ಕಾರಮಾಡಿ, ಅವನ ಮುಂದೆ ಕುಳಿತು, "ಸ್ವಾಮೀ, ನಮ್ಮ ಗರುಡಗಳಿಗೂ ಹಾವುಗಳಿಗೂ ಬದ್ಧ ವೈರವೆಂಬುದು ತಿಳಿದ ಸಂಗತಿ. ನಮ್ಮೊಳಗೆ ಯಾವಾಗಲೂ ಯುದ್ಧ ನಡೆದಾಗಲೆಲ್ಲಾ ಹಾವುಗಳಿಗಿಂತಲೂ ಗರುಡಗಳೇ ಹೆಚ್ಚಾಗಿ ಸಾಯುತ್ತವೆ.

ನಮಗೆ ಹಾವುಗಳನ್ನು ಹೇಗೆ ಹಿಡಿಯಬೇಕೆಂಬುದೇ ಗೊತ್ತಾಗುವುದಿಲ್ಲ. ಇದರಲ್ಲಿ ಏನೋ ರಹಸ್ಯವಿರಬೇಕು. ಅದೆಂತಹ ರಹಸ್ಯವೆಂಬುದನ್ನು ನೀವು ಹಾವುಗಳಿಂದ ಕೇಳಿ ತಿಳಿದು ನಮಗೆ ಹೇಳಬೇಕು. ಅದಕ್ಕಾಗಿ ನೀವೇನು ಕೇಳಿದರೂ ಕೊಡುತ್ತೇನೆ" ಎಂದನು.

ಕರಂಬಿಯನು ಪ್ರತಿಫಲವೇನೂ ಬೇಡವೆಂದನು. ಹಾವುಗಳ ಮೇಲೆ ತನಗೆ ಅಸಹ್ಯವೆಂದು ಹೇಳಿ, ಗರುಡನ ಮಾತಿಗೆ ಸರಿಯೆಂದು ಒಪ್ಪಿದನು.

ಮುಂದೆ ಬೇಗದಲ್ಲೇ ಒಂದು ದಿನ ಸರ್ಪರಾಜ ಪಂಡರಕನು ಕರಂಬಿಯನನ್ನು ನೋಡಲು ಬಂದನು. ಆಗ ಮುನಿ "ಅಯ್ಯಾ ಸರ್ಪರಾಜಾ! ನಿಮ್ಮ ವಿಷಯದಲ್ಲಿ ನನಗೊಂದು ಕುತೂಹಲ. ಗರುಡಗಳು ನಿಮ್ಮನ್ನು ಹಿಡಿದ ಕೂಡಲೇ ಹಾರಲಾಗದೆ ಬಿದ್ದು ಸಾಯುತ್ತವಂತೆ. ಅದಕ್ಕೇನು ಕಾರಣ? ಹೇಗೆ ಹಿಡಿದರೆ ನಿಮ್ಮವರು ಸಿಕ್ಕಿಕೊಳ್ಳುತ್ತಾರೆ?" ಎಂದು ಕೇಳಿದನು.

ಅದಕ್ಕೆ ಸರ್ಪರಾಜನು ಅತ್ಯಂತ ವಿನಯದಿಂದ, "ಸ್ವಾಮೀ, ಅದೊಂದು ನಮ್ಮ ಪರಮ ರಹಸ್ಯ. ನಾನು ಈ ರಹಸ್ಯವನ್ನು ಬಾಯಿಬಿಟ್ಟೆನೆಂದರೆ ನನ್ನ ಜಾತಿಯವರಿಗೆಲ್ಲಾ ದ್ರೋಹ ಮಾಡಿದಂತಾಗುತ್ತದೆ. ಆದ್ದರಿಂದ ಅದನ್ನು ಮಾತ್ರ ಕೇಳಬೇಡಿ" ಎಂದನು.

"ಹಾಗಂದರೇನು? ನನ್ನ ಮೇಲೆ ನಿನಗೆ ನಂಬುಗೆ ಇಲ್ಲವೆ? ನಾನು ರಹಸ್ಯವನ್ನು ಇನ್ನೊಬ್ಬರಿಗೆ ಹೇಳಿ ಬಿಡುವೆನೆಂದು ಶಂಕಿಸುವಿಯಾ? ಹಾಗೆ ಎಂದಿಗೂ ಆಗದು. ನಾನು ಕೇವಲ ಆ ರಹಸ್ಯವೇನೆಂದು ತಿಳಿಯುವ ಕುತೂಹಲಕ್ಕಾಗಿರುಷ್ಟೇ ಕೇಳುತ್ತಿದ್ದೇನೆ. ನನಗೆ ಹೇಳುವುದರಿಂದ ನಿನ್ನ ಜಾತಿಗೆ ಯಾವ ನಷ್ಟವೂ ಆಗದು" ಎಂದನು ಕರಂಬಿಯ ಮುನಿ.

ಸರ್ಪರಾಜನು ಹಾಗೆಯೇ ಹೇಳುವೆನೆಂದು ಕರಂಬಿಯ ಮುನಿಗೆ ಮಾತು ಕೊಟ್ಟು, ಅಪ್ಪಣೆ ಪಡೆದು ಹೊರಟುಹೋದನು. ಮರುದಿನ ಅವನು



ಮುನಿಯ ದರ್ಶನಕ್ಕೆ ಬಂದಾಗ, ಕರಂಬಿಯ ಮುನಿ ಮತ್ತೆ ಅದೇನು ರಹಸ್ಯವೆಂದು ಕೇಳಿದನು. ಆ ದಿನವೂ ಸರ್ಪರಾಜನು ಹೇಳುತ್ತೇನೆಂದು ಹೇಳಿದನೇ ಹೊರತು ಹೇಳಲಿಲ್ಲ. ಮೂರನೇ ಸಾರಿ ಸರ್ಪರಾಜನು ಬಂದಾಗ ಕರಂಬಿಯ ಮುನಿ, "ಈ ದಿನ ಮೂರನೇ ಸಾರಿ ಕೇಳುತ್ತಾ ಇದ್ದೇನೆ. ಹೇಳುತ್ತೇನೆನ್ನುವಿಯೇ ಹೊರತು ಹೇಳುವುದೇ ಇಲ್ಲ. ಹೇಳುತ್ತೇನೆಂದು ಹೇಳದಿರುವುದರ ಅರ್ಥವೇನು? ಅದನ್ನಾದರೂ ಹೇಳು" ಎಂದನು.

ಅದಕ್ಕೆ ಸರ್ಪರಾಜನು, "ಸ್ವಾಮೀ! ಅದು ಬಹು ಮುಖ್ಯ ರಹಸ್ಯ ಸಂಗತಿ. ತಾವು ಯಾರೊಂದಿಗಾದರೂ ಹೇಳುವಿರೇನೋ? ನಾನು ಹೇಳುವಾಗ ಮತ್ತಾರಾದರೂ ಕೇಳುತ್ತಾರೇನೋ? ಎಂದು ಹೆದರುತ್ತೇನೆ" ಎಂದನು.

"ನಾನು ಯಾರಿಗೂ ಹೇಳುವವನಲ್ಲವೆಂದು ಪ್ರಮಾಣ ಮಾಡುತ್ತೇನೆ. ಬೇರೆ ಯಾರೂ ಕೇಳಲು



ಸಾಧ್ಯವಿಲ್ಲದಷ್ಟು ಮೆಲ್ಲನೇ ಹೇಳು" ಎಂದನು ಕರಂಬಿಯ ಮುನಿ. ಹಾಗೆ ಅವನು ಪ್ರಮಾಣ ಕೂಡಾ ಮಾಡಿದ ಮೇಲೆ ಸರ್ಪರಾಜ ಪಂಡರಕನು ತಮ್ಮ ರಹಸ್ಯವನ್ನು ಈ ರೀತಿಯಾಗಿ ಬಯಲು ಪಡಿಸಿದನು.

"ನಾವು ದೊಡ್ಡ ದೊಡ್ಡ ಕಲ್ಲುಗಳನ್ನು ನುಂಗಿ ನಮ್ಮ ಶರೀರಗಳನ್ನು ಭಾರವಾಗುವಂತೆ ಮಾಡಿ ಮಲಗಿಕೊಂಡಿರುತ್ತೇವೆ, ಗರುಡಗಳು ನಮ್ಮನ್ನು ಹಿಡಿಯಲು ಬಂದಾಗ ನಾವು ಬಾಯಿ ತೆರೆದು ಕೊಂಡು ಅವುಗಳನ್ನು ಹಾಯುತ್ತೇವೆ. ಹಾಗೂ ಗರುಡಗಳು ನಮ್ಮ ತಲೆಗಳನ್ನು ಅಮುಕಿಕೊಂಡು ಆಕಾಶದ ಮೇಲೆ ಹಾರುತ್ತವೆ. ಆಗ ಅವುಗಳಿಗೆ ನಮ್ಮ ಶರೀರಭಾರವನ್ನು ಹೊರಲು ಸಾಧ್ಯವಾಗದೆ ಅವುಗಳ ಶರೀರದ ನೀರೆಲ್ಲಾ ಮೇಲೆ ಬಂದು ಬಿಡುತ್ತವೆ. ಆ ಕಾರಣದಿಂದ ಗರುಡಗಳು ಶಕ್ತಿ ಗುಂದಿ ಕೆಳಗೆ ಬಿದ್ದು ಸಾಯುತ್ತವೆ. ಮೂಢಬುದ್ಧಿಯ ಆ ಗರುಡಗಳಿಗೆ ನಮ್ಮ ಬಾಲವನ್ನು ಹಿಡಿದು ಕೊಂಡು ಆಕಾಶಕ್ಕೆ ಹಾರಬೇಕೆಂದು ತೋರುವುದೇ ಇಲ್ಲ. ಹಾಗೆ ಅವುಗಳು ನಮ್ಮನ್ನು ಎತ್ತಿಕೊಂಡು ಹೋಗಿಬಿಟ್ಟರೆ ನಾವು ನುಂಗಿದ ಕಲ್ಲುಗಳೆಲ್ಲಾ ಕೆಳಕ್ಕೆ ಬಿದ್ದು ನಮ್ಮ ಶರೀರಗಳು ಹಗುರಾಗುತ್ತವೆ. ಆಗ ನಾವು ಅವುಗಳ ಬಾಯಿಗೆ ಬೀಳಲೇ ಬೇಕು. ಇದೇ ನಮ್ಮ ರಹಸ್ಯ."

ಸರ್ಪರಾಜನು ಹೊರಟುಹೋದ ಮೇಲೆ ಕರಂಬಿಯ ಮುನಿಯ ಬಳಿಗೆ ಗರುಡರಾಜನು ಬಂದು, "ಸರ್ಪರಾಜನಿಂದ ಹಾವುಗಳ ರಹಸ್ಯ ವನ್ನು ತಿಳಿದುಕೊಂಡಿರಾ ?" ಎಂದು ಕೇಳಲು, ಕರಂಬಿಯನು, ತಾನು ತಿಳಿದುಕೊಂಡ ಆ ಮುಖ್ಯ ರಹಸ್ಯವನ್ನು ಗರುಡ ರಾಜನೊಂದಿಗೆ ಹೇಳಿಯೇ ಬಿಟ್ಟನು.

"ಈ ಸರ್ಪರಾಜನಾದ ಪಂಡರಕನು ಇಡಿಯ ಸರ್ಪಜಾತಿಗೇ ದೊಡ್ಡ ಅಪಚಾರ ಮಾಡಿದ್ದಾನೆ. ತನ್ನ ಜಾತಿ ಪೂರಾ ನಾಶವಾಗುವ ರಹಸ್ಯವನ್ನು ಅವನು ಮತ್ತೊಬ್ಬರೊಂದಿಗೆ ಹೇಳಲೇ ಬಾರದಿತ್ತು. ನಾನು ಈಗಲೇ ಹೋಗಿ ಅವನಿಗೆ ಬುದ್ಧಿ ಕಲಿಸಬೇಕು," ಎಂದುಕೊಂಡು ಗರುಡರಾಜನು ತನ್ನ ರೆಕ್ಕೆಗಳಿಂದ ಝಂ ಝಾ ಮಾರುತವನ್ನು ಹುಟ್ಟಿಸಿ, ಸರ್ಪರಾಜ ಪಂಡರಕನ ಬಾಲವನ್ನು ಹಿಡಿದು ಎತ್ತಿಕೊಂಡು ಆಕಾಶಕ್ಕೆ ಹಾರಿದನು.

ತಲೆಕೆಳಗಾಗಿ ನೇತಾಡುವ ಸರ್ಪರಾಜನು, ತಾನು ನುಂಗಿದ ಕಲ್ಲುಗಳನ್ನೆಲ್ಲಾ ತನ್ನಂತೆ ಕಾರಿಕೊಂಡನು. ಆಮೇಲೆ ಅವನು ದೊಡ್ಡ ಚಿಂತೆಯಿಂದ, "ಅಯ್ಯೋ ! ನನ್ನ ನಾಶವನ್ನು ನಾನೇ ಕೈಯಾರೆ ತಂದುಕೊಂಡೆನು! ಆ ದುಷ್ಟನು ಮಹಾಮುನಿ, ಸತ್ಯವಂತನೆಂದು ಕೊಂಡು ಮೋಸಹೋದೆನು. ನಮ್ಮ ರಹಸ್ಯವನ್ನು ಅವನೊಂದಿಗೆ ಹೇಳಿ ಕೆಟ್ಟೆನು !" ಎಂದು ಬಾಯಿ ಬಿಟ್ಟು ಗೋಳಾಡಿದನು.

ಆದನ್ನು ಕೇಳಿ ಗರುಡರಾಜನು, "ಎಲೋ ಮೂರ್ಖನೇ! ನಿನ್ನ ರಹಸ್ಯವನ್ನು ಆ ಕಳ್ಳ ಸನ್ಯಾಸಿಯೊಂದಿಗೆ ಹೇಳಿದ ಮೇಲೆ ಇನ್ನು ದುಃಖಿಸಿ ಪ್ರಯೋಜನವೇನಿದೆ ? ಯಾರಿಗೂ ಸಾವು ತಪ್ಪದೆಂದುಕೋ. ಆದರೆ ಪ್ರಾಣಿಗಳಿಗೆ ವಿವೇಕವೇ ಪ್ರಧಾನಧರ್ಮ. ವಿರಾಗಿಯಾದವನಿಗೆ ಅಷ್ಟು ಒತ್ತಾಯಮಾಡಿ ನಿಮ್ಮ ರಹಸ್ಯ ಏಕೆ ತಿಳಿಯಬೇಕಿತ್ತೆಂದು ನೀನು ಯೋಚಿಸಲಿಲ್ಲ. ನಿನ್ನ ದುರ್ಗತಿಗೆ ಕಾರಣ ನಾನೂ ಅಲ್ಲ, ಆ ಸನ್ಯಾಸಿಯೂ ಅಲ್ಲ, ನಿನ್ನ ಅವಿವೇಕವೇ ಕಾರಣ. ಪ್ರಾಣಿಗೆ ತಂದೆ ತಾಯಿಗಳಿಗಿಂತ ಹೆಚ್ಚಿನ ಪ್ರೇಮಿಗಳಿಲ್ಲ. ಅಂತಹ ತಂದೆ ತಾಯಿಯರಿಗೆ ಕೂಡಾ ಪ್ರಾಣರಹಸ್ಯವನ್ನು ಹೇಳಬಾರದು. ಅನೇಕ ಮಂದಿ ಬಂಧುಗಳೂ ಮಿತ್ರರೂ ಇರುತ್ತಾರೆ. ರೂಪವತಿಯಾದ ಹೆಂಡತಿ ಇರುತ್ತಾಳೆ. ಅವರಾರಿಗೂ ಮುಖ್ಯ ರಹಸ್ಯವನ್ನು ಹೇಳಕೂಡದು. ಹೀಗೆ ರಹಸ್ಯವನ್ನು ಕಾಪಾಡಿಕೊಂಡಿರುವವನೇ ಶತ್ರುವನ್ನು ದೂರವಿರಿಸುತ್ತಾನೆ" ಎಂದನು.

"ಮಹಾತ್ಮಾ ! ನಿನ್ನ ಹಿತಬೋಧೆಯನ್ನು ತಿಳಿದೆನಯ್ಯಾ. ತಾಯಿ ತನ್ನ ಮಗುವಿನ ಮೇಲೆ ಎಂತಹ ಪ್ರೇಮ ತೋರಿಸುವಳೋ ಅದೇ ಪ್ರೇಮ ನನ್ನ ಮೇಲೆಯೂ ತೋರಿಸು" ಎಂದು ಸರ್ಪರಾಜನು ಗರುಡರಾಜನನ್ನು ಪ್ರಾರ್ಥಿಸಿದನು.

"ಮಗಂದಿರು ಮೂರು ಬಗೆಯವರು. ಶಿಷ್ಯರು, ಸಾಕಿದವರು, ಗರ್ಭವಾಸದಿಂದ ಹುಟ್ಟಿದವರು, ಈ ಮೂವರೂ ಪುತ್ರರೇ. ಅವರಲ್ಲಿ ಶಿಷ್ಯನಾದ ನೀನು ಈಗ ನನಗೆ ಪುತ್ರನಾಗಿರುವಿ. ಆದುದರಿಂದ ನಿನ್ನ ಪ್ರಾಣವನ್ನು ನಾನು ಕಾಪಾಡುತ್ತೇನೆ. ಮೋಸಕ್ಕೆ ಒಳಗಾಗಿ ಸಿಕ್ಕಿಬಿದ್ದವನನ್ನು ಗೆಲ್ಲುವುದೋ ಕೊಲ್ಲುವುದೋ ನ್ಯಾಯವೂ ಅಲ್ಲ, ಪೌರುಷವೂ ಅಲ್ಲ" ಎಂದು ಗರುಡರಾಜನು ಸರ್ಪರಾಜನನ್ನು ನೆಲಕ್ಕೆ ತಂದುಬಿಟ್ಟನು. ಅಲ್ಲಿಂದ ಸರ್ಪರಾಜನು ತನ್ನ ಲೋಕಕ್ಕೆ ಹೊರಟುಹೋದನು.

ಗರುಡರಾಜನು ತನ್ನ ಲೋಕಕ್ಕೆ ಹೋಗಿ, ಗರುಡಗಳೊಂದಿಗೆ, "ನಾನು ಈಗ ಸರ್ಪರಾಜನಾದ



ಪಂಡರಕನನ್ನು ಮಿತ್ರನಾಗಿ ಮಾಡಿಕೊಂಡಿದ್ದೇನೆ. ಆದರೆ ಅವನಿಗೆ ನನ್ನ ಮೇಲೆ ಎಂತಹ ಭಾವನೆ ಇದೆಯೋ ಪರೀಕ್ಷೆ ಮಾಡಬೇಕು." ಎಂದು ಹೇಳಿ ನಾಗಲೋಕಕ್ಕೆ ಹೋಗಿ ತನ್ನ ರೆಕ್ಕೆಗಳಿಂದ ಝುಂಝಾ ಮಾರುತವನ್ನು ಹುಟ್ಟಿಸಿದನು. ಕೂಡಲೇ ಸರ್ಪರಾಜನು ಕಲ್ಲುಗಳನ್ನೂ, ಹೊಯಿಗೆಯನ್ನೂ ನುಂಗಿ ಬಾಲವು ಕಾಣದಂತೆ ಸುತ್ತಿ ಅಡಗಿಸಿಕೊಂಡು ಬಾಯಿ ತೆರೆದು ಭುಸುಗುಟ್ಟ ತೊಡಗಿದನು.

ಅದನ್ನು ನೋಡಿ ಗರುಡರಾಜನು, "ಇದೇನು ಸರ್ಪರಾಜಾ! ನಾವು ಸಂಧಿಮಾಡಿಕೊಂಡು ಸ್ನೇಹಿತರಾದವರಲ್ಲವೇ? ಈಗ ನನ್ನನ್ನು ಕೊಲ್ಲಲಿಕ್ಕೆ ಸಿದ್ಧನಾದ ಹಾಗೆ ಭುಸುಗುಟ್ಟುವುದೇನಿದು?" ಎಂದನು.

ಅದನ್ನು ಕೇಳಿ ಸರ್ಪರಾಜನು, "ಮಿತ್ರಾ, ವಿವೇಕಿಯಾದವನು ಯಾರನ್ನೂ ನಂಬಬಾರದು. ಆದರ ಮೇಲೆ ನಿನ್ನೆಯವರೆಗೆ ಶತ್ರುವಾಗಿದ್ದ ನಿನ್ನನ್ನು ಹೇಗೆ ನಂಬಲಿ?" ಎಂದನು.

ಗರುಡರಾಜನು ನೆಗಾಡಿ, "ನಾನು ಕಲಿಸಿದ ಪಾಠವನ್ನು ಒಪ್ಪಿಸುವಿಯಾ? ಚೆನ್ನಾಗಿದೆ, ಸಾಕು ಬಿಡು. ನಾವೀಗ ಹೋಗಿ ಆ ಕಳ್ಳ ಸನ್ಯಾಸಿಯನ್ನು ನೋಡಿಬರೋಣ, ನಡೆ" ಎಂದನು.

ಇಬ್ಬರೂ ಕೂಡಿ ಕರಂಬಿಯನ ಪರ್ಣಶಾಲೆಗೆ ಹೋದರು. ಸರ್ಪರಾಜನು ಕರಂಬಿಯನನ್ನು ನೋಡಿ, "ಎಲೋ ದ್ರೋಹಿಯೇ! ನಿನ್ನನ್ನು ನೋಡಿ ದೊಡ್ಡ ಮುನಿ ಎಂದುಕೊಂಡು ನಮ್ಮ ರಹಸ್ಯವನ್ನು ಹೇಳಿದರೆ, ಅದನ್ನು ಗರುಡರಾಜನಿಗೆ ಹೇಳಿ ಏಕೆ ವಿಶ್ವಾಸ ಘಾತಮಾಡಿದಿ? ನೀನು ಮಾಡಿದ ಪ್ರಮಾಣ ಏನಾಯಿತು?" ಎಂದು ಕೇಳಿದನು.

"ನಾನು ಅಜ್ಞಾನದಿಂದ ಆ ಕೆಲಸ ಮಾಡಲಿಲ್ಲಪ್ಪಾ, ನೀವಿಬ್ಬರೂ ನನಗೆ ಮಿತ್ರರೇ. ಆದರೂ ನನಗೆ ಗರುಡರಾಜನ ಮೇಲೆ ಹೆಚ್ಚಿನ ಅಭಿಮಾನವಿದ್ದಿತು. ರಹಸ್ಯ ತಿಳಿದರೂ ಅವನಿಂದ ಯಾರಿಗೂ ಹಾನಿಯಾಗದೆಂದು ತಿಳಿದೇ ಹೇಳಿದೆನು" ಎಂದನು ಕರಂಬಿಯು.

"ಹಾಗಿದ್ದರೆ ನೀನೇ ನಮ್ಮೊಳಗೆ ರಾಜೀ ಮಾಡಿಸಬೇಕಿತ್ತು. ಸರ್ವಸಂಗ ಪರಿತ್ಯಾಗಿಯಾಗಿ ಕಾಣುವ ನೀನು ಪಕ್ಷಪಾತದವನೇ ನಿಜ. ಪ್ರಮಾಣ ಭಂಗಿಸಿ ಮಿತ್ರದ್ರೋಹವನ್ನೂ ವಿಶ್ವಾಸಘಾತವನ್ನೂ ಮಾಡಿ ಲೋಕವನ್ನು ವಂಚಿಸುವ ನಿನ್ನ ತಲೆ ಏಳು ಭಾಗವಾಗಿ ಒಡೆಯಲಿ!" ಎಂದು ಸರ್ಪರಾಜನು ಕರಂಬಿಯನನ್ನು ಶಪಿಸಿದನು.

ಮರುಕ್ಷಣದಲ್ಲಿ ಕರಂಬಿಯನ ತಲೆ ಏಳು ತುಂಡುಗಳಾದುವು. ಅವು ಭೂಮಿಗೆ ಬಿದ್ದ ಕೂಡಲೇ ಭೂಮಿ ಸೀಳಿ, ಕರಂಬಿಯನು ಅವೀಚಿ ಎಂಬ ನರಕಕ್ಕೆ ಹೋಗಿ ಸೇರಿದನು.





ನಮ್ಮ ನದಿಗಳು :

# ನರ್ಮದಾ

ನರ್ಮದಾ ನದಿಯು ಜನ್ಮಕ್ಕೆ ಸಂಬಂಧಿಸಿದ ಕಥೆ ಪುರಾಣದಲ್ಲಿದೆ. ಮೈಕಾಲ್ ಪರ್ವತ ಪ್ರಾಂತವು ಅದ್ಭುತವಾದ ಪ್ರಕೃತಿ ಸೌಂದರ್ಯಕ್ಕೆ ತೌರು ಮನೆಯಾಗಿದೆ. ಅದರ ಪರಿಸರಗಳಲ್ಲಿ ಮಾನವ ಸಂಚಾರವಿರಲಿಲ್ಲ. ದೇವತೆಗಳೂ ಯಕ್ಷರೂ ಆಗಾಗ ಅಲ್ಲಿಗೆ ಬರುತ್ತಿದ್ದರು. ಅಲ್ಲಿ ಪ್ರಕೃತಿದೇವಿ ಪ್ರತಿ ಋತುಗಳಲ್ಲಿ ನವನೂತನ ಸೌಂದರ್ಯ ದಿಂದ ರಾರಾಜಿಸುವಳು.

ಒಂದು ಸಾರಿ ಪರಮಶಿವನು ಆ ಬೆಟ್ಟದ ಮೇಲಕ್ಕೆ ಬಂದನು. ಅಲ್ಲಿಯ ಪ್ರಕೃತಿ ಸೌಂದರ್ಯಕ್ಕೆ ಮುಗ್ಧನಾಗಿ ಅಲ್ಲಿಯೇ ಕುಳಿತು ಧ್ಯಾನಮಗ್ನನಾದನು. ಅನೇಕ ಸಂವತ್ಸರಗಳು ಕಳೆದರೂ ಶಿವನು ಕದಲಲಿಲ್ಲ. ಶಿವನ ದಿವ್ಯ ಸುಂದರ ರೂಪವನ್ನು ನೋಡಿ ಪ್ರಕೃತಿಯೂ ಪರವಶಳಾದಳು.





ಪರಮಶಿವನ ಮುಖದಿಂದ ಹೊರಟ ಅದ್ಭುತ ವಾದ ದಿವ್ಯ ತೇಜಸ್ಸು ದಿವ್ಯ ಸುಂದರಿಯಾದ ಕನ್ಯಕಾ ರೂಪವನ್ನು ತಾಳಿತು. ಆ ಕನ್ಯೆ ಶಿವನಿಗೆ ನಮಸ್ಕಾರ ಮಾಡಿ, "ತಂದೆಯೇ, ನಾನು ಯಾವಾಗಲೂ ಸ್ವೇಚ್ಛೆಯಾಗಿ ಆನಂದವಾಗಿ ಇರುವ ಹಾಗೆ ವರವನ್ನು ಕೊಡು !" ಎಂದು ಪ್ರಾರ್ಥಿಸಿದಳು.



"ಹಾಗೆಯೇ ಆಗಲಿ !" ಎಂದು ಪರಮಶಿವನು ಅವಳಿಗೆ ವರವನ್ನು ಕೊಟ್ಟು "ನರ್ಮದಾ" (ಮೃದುಹೃದಯಿ) ಎಂದು ನಾಮಕರಣವನ್ನೂ ಮಾಡಿದನು. ಆಗಿನಿಂದ ಅವಳು ಬಗೆಬಗೆಯ ಪುಷ್ಪ ವನಗಳಿಂದ ತುಂಬಿದ ಗಿರಿವನಗಳಲ್ಲಿ ವನದೇವತೆಯಾಗಿ ಮಲಯ ಮಾರುತದಂತೆ ವಿಹರಿಸಿಕೊಂಡಿದ್ದಳು.

ಜಿಂಕೆ, ನವಿಲು ಮೊದಲಾದ ವನ್ಯ ಪ್ರಾಣಿಗಳು ಅವಳ ಸ್ನೇಹಿತವಾದುವು. ಅವುಗಳೊಂದಿಗೆ ಅವಳು ಕೂಡಿಯಾಡಿ ಆನಂದವಾಗಿ ಕಾಲಕಳೆಯುತ್ತಿದ್ದಳು. ಮೊದಲೇ ಅಂದವಾದ ಆ ಪರ್ವತ ಪ್ರಾಂತಗಳಿಗೆ ಅವಳ ಆಟಪಾಟಗಳು ಇನ್ನಷ್ಟು ಶೋಭೆಯನ್ನು ಹೆಚ್ಚಿಸಿದುವು.





ಅಲ್ಲಿಗೆ ಬಂದ ದೇವತೆಗಳು ನರ್ಮದೆಯನ್ನು ನೋಡಿ, ಅವಳ ಅಂದಚಂದಗಳನ್ನು ನೋಡಿ ಆಶ್ಚರ್ಯದಿಂದ ಮುಗ್ಧರಾದರು. ಅವಳು ವನ್ಯ ಮೃಗಗಳೊಂದಿಗೆ ಆಡಿಕೊಳ್ಳುತ್ತಿರುವಾಗ ಅವಳನ್ನು ಗುಡ್ಡಗಳ ಮರೆಯಲ್ಲಿ ಗಮನಿಸ ತೊಡಗಿದರು. ಅವಳು ಎಲ್ಲಿಗೆ ಹೋದರೂ ದೇವತೆಗಳು ಮರೆಯಲ್ಲಿ ಅವಳನ್ನು ಅನುಸರಿಸಿ ಕೊಂಡೇ ಇದ್ದರು.

ಸ್ವಲ್ಪ ಕಾಲ ಕಳೆದಮೇಲೆ ದೇವತೆಗಳು ಅವಳಿಂದ ದೂರವಿರಲಾಗದೆ, ಮಾತಾಡಿಸಿ ಸ್ನೇಹ ಮಾಡಿಕೊಳ್ಳಬೇಕೆಂದುಕೊಂಡರು. ಅವಳಿಂದ ಆಕರ್ಷಿಸಲ್ಪಟ್ಟು ಸಮೀಪಿಸಿದರು. ಆದರೆ ಅವರಲ್ಲಿ ಯಾರೊಂದಿಗೂ ಮಾತಾಡಲು ನರ್ಮದೆಗೆ ಇಷ್ಟವಿರಲಿಲ್ಲ. ಅವರಲ್ಲೊಬ್ಬನನ್ನು ಮದುವೆಯಾಗಲಿಕ್ಕೂ ಮನಸ್ಸಿರಲಿಲ್ಲ. ಸ್ವೇಚ್ಛೆಯೇ ಅವಳಿಗೆ ಇಷ್ಟವಾಗಿದ್ದಿತು.





ದೇವತೆಗಳು ಬಿಡದೆ ಅವಳನ್ನು ಬೆನ್ನಟ್ಟಿಕೊಂಡೇ ಇದ್ದರು. ಅವಳು ಮಿಂಚಿನಂತೆ ಅವರನ್ನು ತಪ್ಪಿಸಿಕೊಳ್ಳುತ್ತಲೇ ಹೋದಳು. ಪರ್ವತಗಳಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋದರೂ ದೇವತೆಗಳು ಹಿಂದೆಯೇ ಇದ್ದರು. ಅವಳು ಅವರಿಗೆ ಸಿಗದಂತೆ ಸಾಗುತ್ತಲೇ ಇದ್ದಳು.

ಹೀಗೆ ಸ್ವಲ್ಪ ಕಾಲ ನಡೆದ ಮೇಲೆ ನರ್ಮದಾ ಪರ್ವತಶಿಖರದ ಮೇಲೆ ಹತ್ತಿದಳು. ಇನ್ನು ಅಲ್ಲಿಂದ ತಪ್ಪಿಸಿಕೊಳ್ಳಲಾರಳೆಂದು ಭಾವಿಸಿದ ದೇವತೆಗಳು, ಬಹಳ ಉತ್ಸಾಹದಿಂದ ಮೇಲೆ ಹೋದರು. ನರ್ಮದೆ ಅವರ ಕಡೆಗೆ ಒಂದು ಸಾರಿ ನೋಡಿ, ಆಮೇಲೆ ಬೆಟ್ಟದ ಆಚೆಯ ಬದಿಯನ್ನೂ ನೋಡಿದಳು. ಕ್ಷಣಕಾಲ ಹಾಗೆಯೇ ನಿಂತಿದ್ದಳು.





ಅಕಸ್ಮಾತ್ತಾಗಿ ಅವಳು ನೀರಾಗಿ ಮಾರ್ಪಟ್ಟು ನೆಲದೊಳಗೆ ಇಂಗಿ ಬೆಟ್ಟದ ಆಚೆಯಬದಿಯಿಂದ ಪ್ರವಾಹವಾಗಿ ಸಾಗತೊಡಗಿದಳು. ದೇವತೆಗಳು ಏನೂ ತೋರದೆ ಹಾಗೆಯೇ ನಿಂತು ನೋಡು ತ್ತಿದ್ದರು. ಅವಳು ನರ್ಮದಾ ನದಿಯಾಗಿ ಮಾರ್ಪಟ್ಟು ಬೆಟ್ಟಗಳನ್ನೂ ಕಣಿವೆಗಳನ್ನೂ ದಾಟಿ ಮೈದಾನ ಭೂಮಿಯಲ್ಲಿ ಪ್ರವಹಿಸಿ, ಬ್ರೋಚ್ ಎಂಬಲ್ಲಿಯ ಹತ್ತಿರ ಸಮುದ್ರವನ್ನು ಕೂಡಿದಳು.

ಪ್ರಾಚೀನ ಕಾಲದಿಂದಲೂ ನರ್ಮದಾ ನದಿ ಅತಿ ಪವಿತ್ರವಾಗಿ ಭಾವಿಸಲ್ಪಡುತ್ತಿತ್ತು. ಆ ನದಿಯ ತೀರದಲ್ಲಿ ಋಷಿಗಳು ತಪಸ್ಸು ಮಾಡಿದರು. ಭಕ್ತರು ಆ ನದಿಯನ್ನು ಪರಿಕ್ರಮಣ ಮಾಡು ವರು. ಅಂದರೆ, ನರ್ಮದಾ ನದಿ ಉದ್ಭವಿಸುವ ಅಮರ್‌ಕಂಟಕ್ಕಿನಿಂದ ತೀರದಲ್ಲಿಯೇ ಬ್ರೋಚ್ ವರೆಗೆ ಯಾತ್ರೆ ಮಾಡಿ, ಅಲ್ಲಿ ನದಿಯನ್ನು ದಾಟಿ, ಮತ್ತೊಂದು ತೀರದ ದಾರಿಯಾಗಿ ಅಮರ್ ಕಂಟಕ್ಕಿಗೆ ಹಿಂದಿರುಗುವುದು.





ಅಮರ್‌ಕಂಟಕ್ಕಿನ ಹತ್ತಿರ ನರ್ಮದಾ ಮಾತೆಯ ಆಲಯವಿದೆ. ಸಾವಿರಾರು ಮಂದಿ ಭಕ್ತರು ಆಲಯವನ್ನು ದರ್ಶಿಸುತ್ತಿರುತ್ತಾರೆ. ಆದುದ ರಿಂದ ಅದು ದೊಡ್ಡ ಯಾತ್ರಾ ಸ್ಥಳವಾಗಿ ಬೆಳಗಿಕೊಂಡಿರುತ್ತದೆ.

# ಚಂದಾ ವಸೂಲು

ಆಲೂರು ಎಂಬ ಗ್ರಾಮದಲ್ಲಿ ಲಕ್ಷ್ಮೀಶನೆಂಬೊಬ್ಬ ಸಾಹುಕಾರನಿದ್ದನು. ಅವನು ಊರೊಳಗೆ ಪರಮ ಲೋಭಿ ಯೆಂದು ಹೆಸರಾದವನು. ಅದೆಷ್ಟುಮಟ್ಟಿನದೆಂದರೆ, ಎಲ್ಲರೂ ಅವನನ್ನು ಕುರಿತು ಮಾತಾಡುವಾಗ ಲೋಭಿ ಲಕ್ಷ್ಮೀಶನೆಂದೇ ಹೇಳುತ್ತಿದ್ದರು.

ಒಂದು ಸಾರಿ ಗ್ರಾಮಸ್ಥರೆಲ್ಲಾ ಸೇರಿ, ಗ್ರಾಮದೊಳಗೆ ಒಂದು ಛತ್ರವನ್ನು ಕಟ್ಟಿಸಬೇಕೆಂದು ತೀರ್ಮಾನಿಸಿ, ಅದಕ್ಕಾಗಿ ಚಂದಾ ವಸೂಲು ಮಾಡತೊಡಗಿದರು. ಆದರೆ ಅವರಿಗೆ, ಲೋಭಿ ಲಕ್ಷ್ಮೀಶ ಸಾಹುಕಾರನಿಂದ ಹೇಗೆ ಚಂದಾ ವಸೂಲು ಮಾಡಬೇಕೆಂದು ಅರ್ಥವಾಗಲಿಲ್ಲ.

ಆ ಗ್ರಾಮಕ್ಕೆ ಹೊಸತಾಗಿ ಬಂದು ಅಲ್ಲಿಯೇ ಸ್ಥಿರಪಟ್ಟ ಒಂದು ಕುಟುಂಬದಲ್ಲಿ ಶಾಮಣ್ಣನೆಂಬ ಯುವಕ ನೊಬ್ಬನಿದ್ದನು. ಅವನು ಒಳ್ಳೆಯ ಬುದ್ಧಿವಂತನು. ಒಳ್ಳೆಯ ಮಾತುಬಲ್ಲವನು. ಯಾವ ಕೆಲಸವನ್ನಾದರೂ ಸಾಧಿಸುವುದರಲ್ಲಿ ಒಳ್ಳೆಯ ದಿಟ್ಟನು. ಅಂತಲೇ ಗ್ರಾಮಸ್ಥರು ಅವನನ್ನು ಕಾರ್ಯಸಾಧಕನೆಂದೇ ಕರೆಯುವರು.

ಅವನು ಮತ್ತಿಬ್ಬರು ಯುವಕರನ್ನು ಕರೆದುಕೊಂಡು ಲಕ್ಷ್ಮೀಶನ ಬಳಿಗೆ ಹೋಗಿ ಸಂಗತಿಯನ್ನೆಲ್ಲಾ ಹೇಳಿ ಚಂದಾ ಕೇಳಿದನು.

ಲಕ್ಷ್ಮೀಶನು ಆಶ್ಚರ್ಯದಿಂದ ಅವನನ್ನು ನೋಡುತ್ತ, "ನಾನೋ ? ಚಂದಾ ಕೊಡುವುದೇ ? ಇದು ವರೆಗೂ ನಾನು ಯಾರಿಗೂ ಚಂದಾ ಕೊಟ್ಟದ್ದೇ ಇಲ್ಲ. ನಿನಗಿಂತ ಘನಶಾಲಿಗಳೇ ಬಂದು ಬರಿಗೈಯಿಂದ ತಿರುಗಿ ಹೋಗಿದ್ದಾರೆ" ಎಂದನು.

ಆ ಮಾತು ಕೇಳಿ ಶಾಮಣ್ಣ ಸಣ್ಣಗೆ ನಗುತ್ತ, "ಅಯ್ಯಾ, ನಾನು ಅವರ ಹಾಗೆ ಕಡಿಮೆ ಬುದ್ಧಿಯುವನೇ ನಲ್ಲ. ನನ್ನನ್ನು ಎಲ್ಲರೂ ಕಾರ್ಯಸಾಧಕ ಅನ್ನುತ್ತಾರೆ. ನನ್ನ ಇದಿರಿನಲ್ಲಿರುವವರಲ್ಲಿ ಸ್ವಲ್ಪ ಮಾತ್ರ ಬುದ್ಧಿವಂತಿಕೆ ಇದ್ದರೂ ಅವರಿಂದ ಚಂದಾ ವಸೂಲು ಮಾಡಿಕೊಳ್ಳಬಲ್ಲೆ" ಎಂದನು.

ಲೋಭಿ ಲಕ್ಷ್ಮೀಶನಿಂದ ಚಂದಾ ಕೊಡದೆ ತಪ್ಪಿಸಿಕೊಳ್ಳಲಾಗಲಿಲ್ಲ.





# ಬೆಳುದಿಂಗಳ ಏಣಿ

ಪ್ರಸಿದ್ಧವಾದ ವಿಜಯನಗರ ಸಾಮ್ರಾಜ್ಯವನ್ನು ಶ್ರೀಕೃಷ್ಣದೇವರಾಯನು ಆಳಿಕೊಂಡಿದ್ದ ಕಾಲದಲ್ಲಿ, ಪಕ್ಕಾ ಕಳ್ಳನೊಬ್ಬನಿದ್ದನು. ವಿಜಯನಗರದೊಳಗೆ ಅನೇಕ ಧನಿಕರ ಮನೆಗಳು ಅವನ ಕಳ್ಳತನಕ್ಕೆ ಒಳಗಾಗಿದ್ದುವು. ಅವನನ್ನು ಹಿಡಿಯಬೇಕೆಂದು ರಾಜನು ಮಾಡಿದ ಪ್ರಯತ್ನಗಳೆಲ್ಲಾ ವ್ಯರ್ಥವಾಗಿ ಹೋಗುತ್ತಿದ್ದುವು. ಕೃಷ್ಣದೇವರಾಯನಿಗೆ ನಿಂತರೆ, ಕುಳಿತರೆ, ನಡೆದರೆ, ನಿರಂತರವೂ ಆ ಕಳ್ಳನದೇ ಯೋಚನೆಯಾಯಿತು.

ಆ ಕಳ್ಳನನ್ನು ಹೇಗಾದರೂ ಹಿಡಿದು ತೀರಬೇಕೆಂದು ತೆನಾಲಿರಾಮಕೃಷ್ಣನಿಗೆ ತೋರಿತು. ಅವನು ನಾಲ್ಕಾರು ಮಂದಿ ಸೇರಿರುವ ಸ್ಥಳದಲ್ಲಿ "ಅವನೆಂಥ ಕಳ್ಳನೋ ದೊಡ್ಡ ಮಾಯದ ಕಳ್ಳ ! ಯಾವಾಗ ನನ್ನ ಮನೆಗೆ ಬರುತ್ತಾನೋ ಅಂತ ಭಯವಾಗಿದೆ. ಏಕೆಂದರೆ ನನ್ನ ಮನೆಯ ನಡುಕೋಣೆಯಲ್ಲಿ ಹೇರಳವಾದ ಧನರಾಶಿಗಳಿವೆ. ಎಲ್ಲಿ ಅಡಗಿಸಿಡಬೇಕೋ ತಿಳಿಯೋದಿಲ್ಲ ! ಈ ಚಿಂತೆಯಿಂದ ನನಗೆ ರಾತ್ರಿ ನಿದ್ದೆ ಕೂಡಾ ಬರುವುದಿಲ್ಲ, ಅದರಿಂದ ಆರೋಗ್ಯ ಬೇರೆ ಕೆಡುತ್ತಾ ಇದೆ" ಎಂದು ಹೇಳುತ್ತಿದ್ದನು.

ಹೀಗೆ ಅವನು ಅನೇಕ ಕಡೆಗಳಲ್ಲಿ ಹೇಳುತ್ತಾ ಬಂದುದರಿಂದ, ಅವನ ಮನೆಯಲ್ಲಿ ವಿಪರೀತವಾಗಿ ಧನವಿರುವುದೆಂದು ಬೇಗದಲ್ಲೇ ಆ ಕಳ್ಳನಿಗೂ ಗೊತ್ತಾಯಿತು. ಕಳ್ಳನಿಗೆ ಆ ಸಂಗತಿ ಗೊತ್ತಾಗಿ, ಯಾವುದೋ ಒಂದು ದಿನ ರಾತ್ರಿ ತನ್ನ ಮನೆಗೆ ಬಂದೇ ಬರುತ್ತಾನೆಂಬುದೇ ರಾಮಕೃಷ್ಣನ ಉದ್ದೇಶ. ಕಳ್ಳನು ತಮ್ಮ ಮನೆಗೆ ಬಂದಾಗ, ಏನು ಮಾಡಬೇಕು, ಹೇಗೆ ಮಾತಾಡಬೇಕು ಎಂಬುದನ್ನೆಲ್ಲ ರಾಮಕೃಷ್ಣನು ತನ್ನ ಹೆಂಡತಿಗೆ ಚೆನ್ನಾಗಿ ಬಾಯಿಪಾಠ ಮಾಡಿಸಿದನು.

ಇದಿರು ನೋಡುತ್ತಿದ್ದ ಹಾಗೆ ಒಂದು ದಿನ ರಾತ್ರಿ ಆ ಪಕ್ಕಾಕಳ್ಳನು ರಾಮಕೃಷ್ಣನ ಮನೆಗೆ ಬಂದೇ ಬಂದನು. ಅವನಿಗಾಗಿ ರಾತ್ರಿ ಎಚ್ಚರದಲ್ಲೇ ಇದ್ದ ರಾಮಕೃಷ್ಣನು, ಮನೆಯ ಮಾಡಿನ ಮೇಲೆ ಕಳ್ಳನು ಕದಲುವ ಸದ್ದು ಗಮನಿಸಿ ತಲೆದೂಗುತ್ತಾ ಹೆಂಡತಿಗೆ ಸನ್ನೆ ಮಾಡಿದನು.

"ಎಂಥದೇ ನಿನ್ನ ಗೊಡವೆ ! ಸುಮ್ಮನೆ ಮಲಗೋದು ಬಿಟ್ಟು !" ಎಂದನು ರಾಮಕೃಷ್ಣ ರೇಗಿದ ಹಾಗೆ ಗಟ್ಟಿಯಾಗಿಯೇ.

ಅವಳೂ ಗಟ್ಟಿಯಾಗಿಯೇ "ನಿಮ್ಮ ನಿದ್ದೆಯೋ ನೀವೋ! ಹೀಗೆ ನಿದ್ದೆ ನಿದ್ದೆ ಅಂದರೆ ಕಳ್ಳ ಬಂದರೆ ಏನು ಮಾಡೋದು? ನನಗೇನೋ ಭಯವೇ!" ಎಂದು ಸಿಡುಕಿದಳು.

"ಹಾಗೆ ಬಂದರೆ ಬರಲಿ ಬಿಡೇ. ಹೆದರಬೇಡ. ನಮ್ಮ ಸೊತ್ತನ್ನೆಲ್ಲಾ ಆ ಕಳ್ಳ ಎತ್ತಿಕೊಂಡು ಹೋದರೆ, ಹೋದುದರ ನಾಲ್ಕು ಪಾಲು ತಂದು ಹಾಕುತ್ತೇನೆ. ಚಿಂತೆ ಬಿಡು" ಎಂದನು ರಾಮಕೃಷ್ಣ.

"ಅದೇ ನಾನೂ ಕೇಳಬೇಕೂಂತ ಇದ್ದೆ. ನೀವು ಆಗಾಗ ಬಂಗಾರಗಳನ್ನೂ ರತ್ನಗಳನ್ನೂ ತಂದು ತಂದು ಹಾಕುತ್ತೀರಲ್ಲಾ, ಎಲ್ಲಿಂದ ಹೀಗೆ ತರುತ್ತೀರಿ?" ಎಂದಳು ರಾಮಕೃಷ್ಣನ ಹೆಂಡತಿ.

"ಎಲೇ! ಹಾಗೆಲ್ಲಾ ಅರಚಿ ಕೇಳಬೇಡ. ಈ ಸೊತ್ತನ್ನೆಲ್ಲಾ ಕಳ್ಳತನದಿಂದಲೇ ತಂದದ್ದು. ನ್ಯಾಯವಾಗಿ ಇಷ್ಟೆಲ್ಲಾ ಯಾರು ಕೊಡುತ್ತಾರೆ?" ಎಂದನು ರಾಮಕೃಷ್ಣ.

"ಎಲ್ಲಿ ಹೀಗೆ ಕಳ್ಳತನ ಮಾಡುತ್ತೀರಿ? ಹೇಗೆ?" ಎಂದು ಹೆಂಡತಿ ಬಿಡದೆ ಕೇಳಿದಳು.

"ಅದೆಲ್ಲಾ ನಿನಗೇಕೆ? ಚಿರಿ ಪಿರಿ ಪ್ರಶ್ನೆಮಾಡದೆ ಬಾಯಿ ಮುಚ್ಚಿ ಬಿದ್ದುಕೋ" ಎಂದನು ರಾಮಕೃಷ್ಣ.

"ಊಹುಂ. ಇವತ್ತು ಹೇಳಲೇಬೇಕು, ಇಲ್ಲದಿದ್ದರೆ ಬಿಡಲಾರೆ. ಹೀಗೆ ಕಳ್ಳತನ ಮಾಡಿದರೆ ಯಾರಾದರೂ ಹಿಡಿದರೆ ಏನು ಗತಿಯೋ ದೇವರೆ!" ಎಂದಳು ಹೆಂಡತಿ.

"ಆ ಬ್ರಹ್ಮರುದ್ರರೇ ಇಳಿದು ಬಂದರೂ ನನ್ನನ್ನು ಹಿಡಿಯಲಾರರು. ಅಂತಹ ಮಂತ್ರ ನನಗೆ ಗೊತ್ತಿದೆ" ಎಂದನು ರಾಮಕೃಷ್ಣ.

"ಅದೆಂಥ ಮಂತ್ರ. ಹೇಳೀ ಅಂದ್ರೆ!" ಹೆಂಡತಿಯದು ಒಂದೇ ಒತ್ತಾಯ.

ರಾಮಕೃಷ್ಣನು ಸ್ವಲ್ಪ ಹೊತ್ತು ಹೇಳಲಾರೆನೆಂದು ತಿರಸ್ಕರಿಸುತ್ತ, ಕಡೆಗೆ, "ಏನು ಕರ್ಮ ನಿನ್ನದು! ಶನಿಯ ಹಾಗೆ ಹಿಡಿದಿರುವೆಯಲ್ಲಾ! ಆ ರಹಸ್ಯ ಮಂತ್ರ ಹೇಳುತ್ತೇನೆ ಕೇಳು. ನಮ್ಮ ಮಹಾರಾಜರ ಅರಮನೆಯ ಹತ್ತಿರ ಖಜಾನೆ ಇದೆಯೆಂದು ಗೊತ್ತಿದೆಯಷ್ಟೆ? ಅದು ಐದಾಳಿನಷ್ಟು ಎತ್ತರವಾಗಿದೆ. ಅದರ ಮಾಡಿನ ಕೆಳಭಾಗದ ಗೋಡೆಯಲ್ಲಿ ಮನುಷ್ಯನು ನುಸುಳಲಾಗುವಂತಹ ಗವಾಕ್ಷಿಯಿದೆ. ನಾನೇನು ಮಾಡುತ್ತೇನೆ ಗೊತ್ತಾ? ಬೆಳುದಿಂಗಳು ಹಾಯುತ್ತಿರುವಾಗ ಆ ಖಜಾನೆಯ ಮಾಡಿನ ಮೇಲೆ ಹತ್ತುತ್ತೇನೆ. ಗವಾಕ್ಷಿಯ ಮೂಲಕ ಬೆಳುದಿಂಗಳು ಒಳಗೆ ಹಾಯುವವರೆಗೆ ಕಾದಿದ್ದು, 'ಓಂ ಭ್ರಾಂತಿ, ಓಂ ಭ್ರಾಂತಿ, ಓಂ ಭ್ರಾಂತಿ' ಎಂದು ಮೂರು ಸಾರಿ ಉಚ್ಚರಿಸುತ್ತೇನೆ. ಆ ಮಂತ್ರದ ಪ್ರಭಾವದಿಂದ ಚಂದ್ರಕಿರಣಗಳು ಹಗ್ಗದ ಹಾಗೆ ಹೊಸೆದುಕೊಂಡು ಕ್ಷಣಮಾತ್ರದಲ್ಲಿ ನೂಲೇಣಿಯಾಗಿ ನನ್ನ ಕೈಗೆ ಸಿಗುತ್ತದೆ. ಅದನ್ನು ಹಿಡಿದು ಜಾರುತ್ತಾ ಖಜಾನೆಯೊಳಗೆ ಇಳಿಯುತ್ತೇನೆ. ನನಗೆ ಬೇಕಾದಷ್ಟು



ಧನವನ್ನು ಬಾಚಿ ಗಂಟುಕಟ್ಟಿಕೊಂಡು, ಮತ್ತೆ ಕಿರಣಗಳ ಏಣಿಯನ್ನೇ ಹಿಡಿದುಕೊಂಡು ಮೇಲೆ ಬಂದು ಬಿಡುತ್ತೇನೆ. ಕಳ್ಳತನ ಹೇಗೆ ನಡೆಯಿತೆಂದು ಬ್ರಹ್ಮರುದ್ರರಿಗೆ ಸಹಾ ಗೊತ್ತಾಗುವುದಿಲ್ಲ. ಹೀಗೆ ಬೆಳುದಿಂಗಳ ಏಣಿಯ ಸಹಾಯದಿಂದ ನಾನು ರಾಜನ ಖಜಾನೆಯನ್ನು ಕೊಳ್ಳೆ ಹೊಡೆಯುತ್ತೇನೆ. ಯಾರೂ ನನ್ನನ್ನು ಹಿಡಿಯಲು ಸಾಧ್ಯವಿಲ್ಲ" ಎಂದು ತೆನಾಲಿ ರಾಮಕೃಷ್ಣನು ಹೇಳಿದನು.

"ಹೀಗೇನು ?" ಎಂದು ಹೆಂಡತಿ ಆಶ್ಚರ್ಯವನ್ನೂ ತೃಪ್ತಿಯನ್ನೂ ವ್ಯಕ್ತಪಡಿಸಿ ಕಣ್ಣುಮುಚ್ಚಿ ಮಲಗಿದಳು.

ಗಂಡಹೆಂಡಿರ ಈ ಸಂಭಾಷಣೆಗಳನ್ನು ಕಳ್ಳನು ಕಿವಿಗೊಟ್ಟು ಕೇಳಿದನು. ಈಗ ಅವನಿಗೆ ಸಾಧಾರಣ ಕಳ್ಳತನದ ಮೇಲೆ ಮೋಜು ಹೋಯಿತು. ದೋಚಿಕೊಂಡರೆ ರಾಜನ ಖಜಾನೆಯನ್ನೇ ದೋಚಿಕೊಳ್ಳಬೇಕು ಅನಿಸಿತು.

ಮರುದಿನ ರಾತ್ರಿ ಆ ಪಕ್ಕಾ ಕಳ್ಳನು ಮನೆಗಳ ಮೇಲ್ಮಾಳಿಗೆಯ ಮೇಲಿನಿಂದಲೇ ಹರಿಯುತ್ತಾ, ತೆವಳುತ್ತಾ ಖಜಾನೆಯ ಮಾಡನ್ನು ಸೇರಿಕೊಂಡನು. ರಾಮಕೃಷ್ಣನು ಹೇಳಿದ ಗವಾಕ್ಷಿಯನ್ನೂ ನೋಡಿದನು. ಅದು ಭೂಮಿಗೆ ಸುಮಾರು ಐದಾಳೆಷ್ಟು ಎತ್ತರದಲ್ಲೇ ಇದ್ದಿತು. ಅದಕ್ಕಾಗಿ ಕಳ್ಳನೇನೂ ಹೆದರಲಿಲ್ಲ. ಆ ಗವಾಕ್ಷಿಯಿಂದ ಖಜಾನೆಯೊಳಗೆ ಚಂದ್ರಕಿರಣಗಳು ಬೀಳುವವರೆಗೂ ಕಾದಿದ್ದು ಆಮೇಲೆ ಮೂರು ಸಾರಿ "ಓಂ ಭ್ರಾಂತಿ, ಓಂ ಭ್ರಾಂತಿ, ಓಂ ಭ್ರಾಂತಿ" ಎಂದು ಉಚ್ಚರಿಸಿ ಗವಾಕ್ಷಿಯ ಮೇಲೆ ಕಾಲುಗಳನ್ನಿಟ್ಟು, ಕೈಗಳಿಂದ ಕಿರಣಗಳನ್ನು ಹಿಡಿಯುವಂತೆ ಮಾಡುತ್ತ ಕೆಳಗೆ ಹಾರಿದನು.

ಅವನ ಕೈಗೆ ಗಾಳಿಯ ಹೊರತು ಮತ್ತೇನೂ ಸಿಕ್ಕಲಿಲ್ಲ. ಅಷ್ಟು ಎತ್ತರದಿಂದ ಬಿದ್ದುದರಿಂದ ಅವನ ಕಾಲುಗಳೆರಡೂ ಮುರಿದು ಹೋದುವು. ಮರುದಿನ ರಾಜಭಟರು ಖಜಾನೆಯ ಬಾಗಿಲು ತೆರೆದಾಗ ಪಕ್ಕಾ ಕಳ್ಳನು ಕದಲಲಾಗದ ಸ್ಥಿತಿಯಲ್ಲಿರುವುದನ್ನು ನೋಡಿದರು, ಕಳ್ಳ ಸುಲಭವಾಗಿ ಸಿಕ್ಕಿಬಿದ್ದನು. ಆಮೇಲೆ ಅವನು ಕದ್ದುಕೊಂಡ ಸೊತ್ತುಗಳೆಲ್ಲವೂ ಸುಲಭವಾಗಿಯೇ ಸಿಕ್ಕಿದುವು.

ತರುವಾಯ ತೆನಾಲಿ ರಾಮಕೃಷ್ಣನು ಕೃಷ್ಣದೇವರಾಯನ ಸಭೆಯಲ್ಲಿ, ಕಳ್ಳನನ್ನು ಹಿಡಿಯಲು ತಾನು ಮಾಡಿದ ಯುಕ್ತಿಯನ್ನು ಕುರಿತು ಹೇಳಿದನು. ಸಭಿಕರೆಲ್ಲರೂ ಬಿದ್ದು ಬಿದ್ದು ನಕ್ಕರು.

ಪಕ್ಕಾ ಕಳ್ಳನನ್ನು ಹಿಡಿಸಿಕೊಟ್ಟ ರಾಮಕೃಷ್ಣನಿಗೆ ಕೃಷ್ಣದೇವರಾಯನಿಂದ ಶ್ಲಾಘನೆಯೂ, ಒಳ್ಳೆಯ ಬಹುಮಾನಗಳೂ ಸಿಕ್ಕಿದುವು,



# ಲಾಭವಿಲ್ಲದ ಕೆಲಸ

ಗ್ರಾಮದಲ್ಲಿ ಚಿಲ್ಲರೆ ಅಂಗಡಿಯನ್ನಿಟ್ಟು ನಡೆಸಿಕೊಂಡಿದ್ದ ವರಾಹಯ್ಯನು, ತಾನು ಯಾವ ಕೆಲಸ ಮಾಡಿದರೂ ವ್ಯಾಪಾರದ ರೀತಿಯಲ್ಲೇ ಮಾಡುವವನೆಂದೂ, ಲಾಭವಿಲ್ಲದ ಕೆಲಸ ತಾನು ಮಾಡಲಿಕ್ಕೇ ಇಲ್ಲವೆಂದೂ ಎಲ್ಲ ರೊಡನೆ ಹೇಳಿಕೊಳ್ಳುತ್ತಿದ್ದನು.

ಅವನ ನೆರೆಯಲ್ಲಿರುವ ಗಂಗಣ್ಣನಿಗೆ, ಆ ವರಾಹಯ್ಯನು ಲಾಭವಿಲ್ಲದ ಏನೋ ಒಂದು ಕೆಲಸ ಮಾಡುವು ದನ್ನು ನೋಡಬೇಕೆಂದು ಕುತೂಹಲವಾಗಿತ್ತು. ಆದರೆ ಎಷ್ಟು ಕಾಲ ಕಳೆದರೂ ಅವನ ಬಯಕೆ ಈಡೇರಲಿಲ್ಲ. ಕಡೆಗೆ ಗಂಗಣ್ಣನು ಬೇಸತ್ತು, ವರಾಹಯ್ಯನಿಂದ ತಾನೇ ಒಂದು ಲಾಭವಿಲ್ಲದ ಕೆಲಸ ಮಾಡಿಸಬೇಕೆಂದು ನಿಶ್ಚಯಿಸಿ, ಅವನ ಹತ್ತಿರ ಸೂಜಿಯಿದ್ದರೆ ಸ್ವಲ್ಪ ಹೊತ್ತು ಕೊಡುವಂತೆ ಕೇಳಿದನು. ವರಾಹಯ್ಯ ಸೂಜಿಯನ್ನು ಗಂಗಣ್ಣನಿಗೆ ಕೊಟ್ಟನು.

ಗಂಗಣ್ಣನು ಹರಿದು ಹೋದ ತನ್ನ ಅಂಗಿಯನ್ನು ಹೊಲಿದುಕೊಂಡು ವರಾಹಯ್ಯನಿಗೆ ಸೂಜಿಯನ್ನು ಹಿಂದೆ ಕೊಟ್ಟನು. ವರಾಹಯ್ಯ ಏನೂ ಹೇಳಲಿಲ್ಲ.

ಅವನೊಂದಿಗೆ ಕೆಲಸ ಮಾಡಿಸಿದೆನೆಂದು ಗಂಗಣ್ಣ ತೃಪ್ತಿ ಪಟ್ಟನು. ಮತ್ತೊಂದು ಸಾರಿ ಗಂಗಣ್ಣ ವರಾಹಯ್ಯನನ್ನು ಸುತ್ತಿ ಬೇಕೆಂದು ಕೇಳಿ ತಂದುಕೊಂಡು, ಎರಡು ದಿನಗಳ ಮೇಲೆ ಅದನ್ನು ವಾಪಾಸು ಕೊಟ್ಟನು. ಈಗಲೂ ವರಾಹಯ್ಯ ಏನೂ ಹೇಳಲಿಲ್ಲ.

ಸುಮ್ಮನಿರಲಾಗದೆ ಗಂಗಣ್ಣ ವರಾಹಯ್ಯನ ಹತ್ತಿರ, "ನಿನ್ನಿಂದ ಲಾಭವಿಲ್ಲದ ಎರಡು ಕೆಲಸಗಳನ್ನು ನಾನು ಮಾಡಿಸಿಕೊಂಡಿದ್ದೇನೆ" ಎಂದನು ಹೆಮ್ಮೆಯಿಂದ.

"ನಾನು ಲಾಭವಿಲ್ಲದ ಕೆಲಸ ಕನಸಿನಲ್ಲಿಯೂ ಮಾಡವವನಲ್ಲ" ಎಂದ ವರಾಹಯ್ಯ ನಗುತ್ತ.

"ನಿನ್ನ ಸೂಜಿ ಕೇಳಿ ತೆಗೆದುಕೊಂಡಿದ್ದೇನೆ. ನಿನಗೇನು ಲಾಭವಾಯಿತು ?" ಎಂದು ಕೇಳಿದ ಗಂಗಣ್ಣ.

"ಅದರೊಂದಿಗೆ ನೀನು ಉಳಿಸಿದ ದಾರದಿಂದ ನನ್ನ ಪಂಚೆಯನ್ನು ಹೊಲಿದುಕೊಂಡೆ." ಎಂದನು ವರಾಹಯ್ಯ.

ಗಂಗಣ್ಣ ಮೆಟ್ಟಿ ಬಿದ್ದು, "ಹಾಗಾದರೆ ಸುತ್ತಿಯ ವಿಷಯ ?" ಎಂದನು.

"ಅದರ ಹಿಡಿ. ಸಡಿಲಾಗಿದ್ದಿತು. ಸರಿಪಡಿಸಲು ಉದಾಸೀನ ಮಾಡಿ ಹಾಗೆಯೇ ಇಟ್ಟಿದ್ದೆ. ಅಷ್ಟರಲ್ಲಿ ನೀನು ಕೇಳಿದಿ. ಈಗ ಹಿಡಿ ಬಿಗಿಯಾಗಿದೆ" ಎಂದ ವರಾಹಯ್ಯ.

ಗಂಗಣ್ಣನಿಗೆ ಆಗ ನೆನಪಿಗೆ ಬಂತು. ಅವನು ಗೋಡೆಗೆ ಆಣಿ ಹೊಡೆಯುವಾಗ ಸುತ್ತಿಯ ಹಿಡಿ ಜಾರಿದರೆ ತಾನೇ ಅದನ್ನು ಸರಿಪಡಿಸಿ ತಂದು ಆಣಿ ಹೊಡೆದು ತನ್ನ ಕೆಲಸ ಮುಗಿಸಿದ್ದನು !





# ನಯವಂಚನೆ

**ಬಾ**ಗ್ದಾದು ನಗರದ ಹತ್ತಿರದಲ್ಲಿರುವ ಒಂದು ಗ್ರಾಮದಲ್ಲಿ ಮಧ್ಯಾಹ್ನದ ಬಿಸಿಲಿನ ಹೊತ್ತಿನಲ್ಲಿ ಕೆಲವರು ದೊಡ್ಡದೊಂದು ಮರದ ನೆರಳಿನಲ್ಲಿ ಕುಳಿತುಕೊಂಡು ಲೋಕಾಭಿರಾಮವಾಗಿ ಮಾತಾಡಿಕೊಂಡಿದ್ದರು. ಅಗ ಒಬ್ಬ ನಡುವಯಸ್ಸಿನ ಮನುಷ್ಯನು ಎಲ್ಲಿಂದಲೋ ನಡೆಯುತ್ತಾ ಅವರ ಹತ್ತಿರಕ್ಕೇ ಬಂದನು. ಅವನು ಆ ಊರಿನವನಂತೂ ಅಲ್ಲ. ಧೂಳು ತುಂಬಿದ ಮಲಿನವಾದ ದುಸ್ತು ಅವನದು. ತಲೆಕೂದಲೆಲ್ಲ ಕೆರಳಿಕೊಂಡಿದ್ದಿತು. ಸುಮ್ಮನೆ ತಲೆ ಕೊಡರಿಕೊಂಡೇ ಬರುವ ಅವನು ಹುಚ್ಚನೇನೋ ಅನಿಸಿತು.

ಅವನು ಮರದ ನೆರಳಿನಲ್ಲಿ ಕುಳಿತವರನ್ನು ಸಮೀಪಿಸಿ, ಎಲ್ಲರ ಮುಖಗಳನ್ನೂ ಪರೀಕ್ಷಿಸಿ ನೋಡಿ, "ಸುಖವನ್ನು ಅಂಟಿಕೊಂಡೇ ದುಃಖವೂ ಇರುತ್ತದೆ. ವಿಜಯದ ಬೆನ್ನಿಗೇ ಅಪಜಯವೂ ತಗಲಿದೆ! ಬೆಳಕು ಇರುವಲ್ಲಿ ನೆರಳೂ ಇರುತ್ತದೆ. ಇದೆಲ್ಲಾ ಸುಳ್ಳೆನ್ನುವಿರಾ ?" ಎಂದನು.

ಗ್ರಾಮಸ್ಥರಲ್ಲಿ ಒಬ್ಬನು ಅವನನ್ನು ನೋಡಿ, "ಅದಿರಲಿ, ನೀನು ನಮ್ಮೊಂದಿಗೆ ಹೀಗೆಲ್ಲಾ ಏಕೆ ಹೇಳುವೆ? ಅಸಲು ಏನನ್ನು ಹೇಳಲಿಕ್ಕೆ ಬಂದಿರುವಿ ?" ಎಂದು ಕೇಳಿದನು.

"ನನ್ನ ಜೀವನದ ಅನುಭವದಿಂದ ನಾನು ತಿಳಿದುಕೊಂಡ ಸತ್ಯವನ್ನು ನಿಮಗೆ ಹೇಳಿದೆನು. ಅದನ್ನು ವಿವರವಾಗಿ ತಿಳಿಯಬೇಕಾದರೆ ಹೇಳುತ್ತೇನೆ ಕೇಳಿರಿ" ಎಂದು ತನ್ನ ಕಥೆಯನ್ನೆಲ್ಲಾ ಅವರೊಂದಿಗೆ ಹೇಳಿದನು. ಕೇಳಲು ಸ್ವಾರಸ್ಯವಾಗಿಯೇ ಇತ್ತು. ಹೊತ್ತು ಹೋದುದೇ ತಿಳಿಯಲಿಲ್ಲ.

ಅವನು ಬಾಗ್ದಾದು ನಗರದ ಒಂದು ದ್ವಾರಕ್ಕೆ ಕಾವಲುಗಾರನಾಗಿರುವವನು. ಒಂದು ದಿನ ಬೆಳುದಿಂಗಳ ರಾತ್ರಿಯಲ್ಲಿ ಅವನು ದ್ವಾರದ ಹತ್ತಿರ ಕುಳಿತುಕೊಂಡು, ತೂಕಡಿಸಿಕೊಂಡಿದ್ದನು. ಆಗ ಮೃದುವಾದ ಒಂದು ಹಸ್ತವು ಅವನ ಮುಖವನ್ನು ಸವರಿತು. ಥಕ್ಕನೆ ಕಣ್ಣು ತೆರೆದು ನೋಡಿದನು. ಅವನ ಇದಿರಿನಲ್ಲಿ ಸುಂದರಿಯಾದೊಬ್ಬ ಯುವತಿ ಮುಗುಳುನಗುತ್ತ ನಿಂತಿದ್ದಳು. ಬೇರೆ ಯಾರೂ ಇಲ್ಲದೆ, ಅವಳೊಬ್ಬಳೇ ಇರುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಏನೇನೋ ಅನುಮಾನಗಳೂ ಬಂದುವು.

ಅರೇಬಿಯಾ ಕಥೆ

ಅವನು ಅವಳನ್ನು ನೋಡಿ ಎದ್ದು ನಿಂತು, "ಯಾರು ನೀನು? ಇಂತಹ ರಾತ್ರಿಯ ಹೊತ್ತಿನಲ್ಲಿ ಇಲ್ಲಿ ನನ್ನ ಹತ್ತಿರ ನಿನಗೇನು ಕೆಲಸ?" ಎಂದು ಕೇಳಿದನು.

ಆ ಸ್ತ್ರೀ ಉತ್ತರವೇನೂ ಹೇಳದೆ ಅವನ ಕೈಗೆ ಕೆಲವು ಬೆಳ್ಳಿಯ ನಾಣ್ಯಗಳನ್ನು ಇಡುತ್ತ ಮತ್ತೊಮ್ಮೆ ಮುಗುಳುನಗು ನಕ್ಕಳು.

"ನಾನು ಲಂಚಕೋರ ಮನುಷ್ಯನಲ್ಲ!" ಎಂದನು ಕಾವಲುಗಾರ ಭಟ.

ಅವಳು ಮಂಜುಳ ಸ್ವರದಿಂದ, "ಇದು ಲಂಚವಲ್ಲ. ಲಂಚವೆಂದರೆ ಒಂದು ಕೆಟ್ಟ ಕೆಲಸಕ್ಕೆ ಸಹಾಯ ಮಾಡಲು ಕೊಡುವಂಥಾದ್ದು. ಈಗ ನಾನು ಕೊಡುವ ಹಣ ಒಂದು ಒಳ್ಳೆಯ ಕೆಲಸಕ್ಕೆ ನನಗೆ ನೀನು ಸಹಾಯ ಮಾಡಬೇಕು, ಅದಕ್ಕೇ" ಎಂದಳು.



"ಅದೆಂತಹ ಒಳ್ಳೆಯ ಕೆಲಸ?" ಎಂದು ಕೇಳಿದನು ಕಾವಲುಗಾರ.

"ಬಿಟ್ಟುಹೋದ ಇಬ್ಬರು ಸ್ನೇಹಿತೆಯರನ್ನು ಮತ್ತೆ ಕೂಡಿಕೊಳ್ಳುವಂತೆ ಮಾಡುವುದು ಒಳ್ಳೆಯ ಕೆಲಸವಲ್ಲವೇ? ನಗರದ ಖಾಜೀಯವರ ಕುಮಾರಿಯೂ ನಾನೂ ಒಳ್ಳೆಯ ಸ್ನೇಹಿತೆಯರು. ಆದರೆ ಖಾಜೀ ಯಾವ ಕಾರಣದಿಂದಲೋ ನಾವು ಒಬ್ಬರನ್ನೊಬ್ಬರು ನೋಡುವುದನ್ನೂ ಮಾತಾಡುವುದನ್ನೂ ಇಷ್ಟಪಡುವುದಿಲ್ಲ. ಖಾಜೀಯ ಮಗಳು ನನ್ನನ್ನು ನೋಡಲಾಗದೆ ಬಹಳ ವ್ಯಸನಪಡುತ್ತಿದ್ದಾಳೆ. ನಾನು ಈ ದಿನ ರಾತ್ರಿ ಖಾಜೀಯವರ ಮನೆಯಲ್ಲಿ ಇರಲಿಕ್ಕೆ ನೀನು ಸಹಾಯ ಮಾಡಬೇಕು" ಎಂದಳು ಆ ಸುಂದರಿ.

"ಅದು ಹೇಗೆ ಸಾಧ್ಯವಾದೀತು?" ಎಂದು ಕಾವಲುಭಟನು ಆಶ್ಚರ್ಯದಿಂದ ಅವಳನ್ನೇ ನೋಡುತ್ತ ಕೇಳಿದನು.

"ನೀನು ಒಪ್ಪಿಕೊಂಡರೆ ಅದೇನೂ ಕಷ್ಟವಲ್ಲ" ಎಂದು ಅವಳು, ಆ ಕಾವಲುಭಟನು ಏನು ಮಾಡಬೇಕೆಂಬುದನ್ನೆಲ್ಲ ಅವನಿಗೆ ಹೇಳಿದಳು. ಅದೆಲ್ಲಾ ಅವನಿಂದ ಆಗುವಂಥ ಕಾರ್ಯಗಳೇ.

ಕಾವಲು ಭಟನು ಅವಳನ್ನು ತನ್ನೊಂದಿಗೆ ಕರೆದುಕೊಂಡು ಖಾಜೀಯ ಮನೆಗೆ ಹೋಗಿ ಬಾಗಿಲು ತಟ್ಟಿದನು. ಖಾಜೀ ಬಾಗಿಲು ತೆರೆದಕೂಡಲೇ ಭಟನು, "ಅಯ್ಯಾ, ಈ ಅಮ್ಮಯ್ಯ ಹೊರಗಿನ ಊರಿನಿಂದ ಇಲ್ಲಿಗೆ ಬಂದಳು. ಇಲ್ಲೆಲ್ಲೋ ಇವಳ ಬಂಧುಗಳೊಬ್ಬರು ಇದ್ದಾರಂತೆ. ಅವರ ಮನೆಯ ವಿವರದ ಚೀಟು ಎಲ್ಲಿಯೋ ಕಳೆದುಹೋಯಿತಂತೆ. ನಿಮ್ಮ ಮನೆಯ ಹೊರಗಿನ ಜಗಲಿಯಲ್ಲಿ ಇವಳು ದುಃಖಿಸುತ್ತಾ ಕುಳಿತಿರುವುದನ್ನು ನಾನು ನೋಡಿದೆ. ಇವಳ ತಂದೆಯನ್ನು ನಾನು ಬಲ್ಲೆನು. ಬಹಳ ಮರ್ಯಾದಸ್ಥ ಕುಟುಂಬ ಪಾಪ. ಇವಳ ಶರೀರದ ಮೇಲೆ ಬಂಗಾರದ ನಗಗಳೂ ಇವೆ. ರಾತ್ರಿಯ



ಹೊತ್ತಿನಲ್ಲಿ ಬೀದಿಯ ಬದಿಯಲ್ಲಿರುವುದು ಕ್ಷೇಮವಲ್ಲ. ಈ ಒಂದು ರಾತ್ರಿ ನಿಮ್ಮ ಮನೆಯೊಳಗೆ ಮಲಗಲಿಕ್ಕೆ ಇವಳಿಗಿಷ್ಟು ಜಾಗ ಕೊಡುವುದು ಧರ್ಮವಾಗಿರುತ್ತದೆ. ಧರ್ಮಾತ್ಮರಾದ ನೀವು ನಿರಾಕರಿಸಲಾರಿರೆಂದು ನಂಬುತ್ತೇನೆ" ಎಂದನು.

ಖಾಜೀ ನ್ಯಾಯಕರ್ತನೂ ಆದುದರಿಂದ ಕಾವಲಿನ ಭಟನು ಹೇಳಿದ ಮಾತಿಗೆ ಸಾಧ್ಯವಿಲ್ಲವೆನ್ನಲಾಗದೆ, ಆ ಸ್ತ್ರೀಯನ್ನು ತನ್ನ ಮನೆಯೊಳಗೆ ಬರಮಾಡಿಸಿಕೊಂಡನು.

ಆ ದಿನ ರಾತ್ರಿ ತನ್ನ ಕೆಲಸ ಮುಗಿದ ಮೇಲೆ ಕಾವಲುಭಟನು ತನ್ನ ಮನೆಗೆ ಹೋದನು. ಸ್ವಲ್ಪ ಹೊತ್ತಿನಲ್ಲೇ ಕೆಲಮಂದಿ ಭಟರು ಬಂದು ಅವನ ಮನೆಯ ಬಾಗಿಲು ತಟ್ಟಿದರು.

ಕಾವಲುಭಟನು ಕೋಪದಿಂದ ಬಾಗಿಲು ತೆರೆದು ಏನು ಸಂಗತಿ ಎಂದು ಕೇಳಿದಾಗ, ಅವರು ಅವನನ್ನು ಕೂಡಲೇ ಕೋತ್ವಾಲನ ಕಚೇರಿಗೆ ಬರಬೇಕೆಂದು ಅವಸರಪಡಿಸಿದರು. ಅವನು ಅವರ ಜೊತೆಯಲ್ಲಿ ಕೋತ್ವಾಲನ ಬಳಿಗೆ ಹೊರಟನು.

ಅಲ್ಲಿ ಕೋತ್ವಾಲನೊಂದಿಗೆ ಖಾಜೀ ಕೂಡಾ ಕುಳಿತ್ತಿದ್ದನು. ಕಾವಲಿನ ಭಟನನ್ನು ನೋಡಿದ ಕೂಡಲೇ ಖಾಜೀ ಕೋಪದಿಂದ ಕಣ್ಣುಗಳನ್ನು ದೊಡ್ಡದು ಮಾಡಿ, "ಏನೋ ದುಷ್ಟನೇ! ಎಂಥಾ ಠಕ್ಕ ನೀನು! ಎಲ್ಲಿದ್ದಾಳೋ ನಿನ್ನ ಕಳ್ಳಿ ಸ್ನೇಹಿತೆ?" ಎಂದು ಗದರಿಸಿ ಕೇಳಿದನು.

ಆ ಪ್ರಶ್ನೆ ಕೇಳಿದ ಕೂಡಲೇ ಕಾವಲುಭಟನಿಗೆ ಏನೂ ತೋರದೆ ಆಶ್ಚರ್ಯವಾಯಿತು. ಆಮೇಲೆ ಅವರಿಂದ ಅವನಿಗೆ ತಿಳಿದುಬಂದುದೇನೆಂದರೆ, ರಾತ್ರಿಯಲ್ಲಿ ಅವನು ಖಾಜೀಯ ಮನೆಯಲ್ಲಿ ಆಶ್ರಯ ಕೊಡಿಸಿದ ಸ್ತ್ರೀ, ಖಾಜೀಯ ಮನೆಯಲ್ಲಿದ್ದ ನಗನಟ್ಟು ನಾಣ್ಯಗಳನ್ನೆಲ್ಲ, ಅಪಹರಿಸಿಕೊಂಡು ಓಡಿಹೋಗಿದ್ದಾಳೆಂಬುದೇ!

"ಎಲವೋ ಜತೆಕಳ್ಳಾ! ನಿನಗೆ ಮರಣ ದಂಡನೆಯೇ ಸರಿ!" ಎಂದು ಖಾಜೀ ದೊಡ್ಡ ದನಿಯಿಂದ ಕೂಗಿದನು.

ಕಾವಲುಭಟನು ಹೆದರಿ ನಡುಗುತ್ತ, "ಅಯ್ಯಾ, ನ್ಯಾಯಪ್ರಕಾರ ಅಪರಾಧಿಯಾದವನಿಗೆ, ತಾನು ನಿರಪರಾಧಿ ಎಂಬುದನ್ನು ನಿರೂಪಿಸಲು ಅಥವಾ ನಡೆದ ನಷ್ಟಕ್ಕೆ ತಕ್ಕ ಪರಿಹಾರ ಕೊಡಲು ಮೂರು ದಿನಗಳ ಗಡು ಕೊಡಬೇಕೆಂದಿದೆಯಷ್ಟೇ? ಆ ಮೂರೇ ದಿನಗಳ ಗಡುವನ್ನು ನನಗೂ ದಯಪಾಲಿಸಬೇಕು! ಧರ್ಮಪ್ರಭುಗಳು ನಿರಾಕರಿಸಬಾರದು" ಎಂದು ಬೇಡಿಕೊಂಡನು.

ಅದಕ್ಕೆ ಕೋತ್ವಾಲನೂ ಖಾಜೀಯೂ ಪರಸ್ಪರ ನೋಡಿ ಸನ್ನೆ ಮಾಡಿಕೊಂಡು, ಮೂರು ದಿನಗಳ ಗಡುಕೊಟ್ಟು, ಅವನನ್ನು ಬಿಟ್ಟರು. ಕಾವಲಿನ ಭಟನು ಎರಡು ದಿನಗಳವರೆಗೆ ಆ ಸ್ತ್ರೀಯನ್ನು ನಗರದ ಬೀದಿಗಳಲ್ಲೆಲ್ಲಾ ಹುಡುಕಿದನು. ಎಲ್ಲಿಯೂ

ಅವಳು ಕಾಣಿಸಲಿಲ್ಲ. ಇನ್ನು ತನಗೆ ಸಾವು ತಪ್ಪುವುದಿಲ್ಲವೆಂದು ಅವನಿಗೆ ಭಯ ಹಿಡಿದುಕೊಂಡಿತು.

ಆದರೆ ಮೂರನೇ ದಿನ ಒಂದು ಬೀದಿಯಲ್ಲಿದ್ದ ಮನೆಯ ಕಿಟಕಿಯೊಳಗಿನಿಂದ ಅವನಿಗೆ ಆ ಸ್ತ್ರೀಯ ಮುಖವು ಕಂಡಿತು. ಅವಳು ಅವನನ್ನು ನೋಡಿದ ಕೂಡಲೇ ಕಿರುನಗುವನ್ನು ತೋರಿಸುತ್ತ ಒಳಗೆ ಬರುವಂತೆ ಕೈಜಾಡೆ ಮಾಡಿದಳು. ಕಾವಲುಭಟನು ಓಡುತ್ತಾ ಅವಳ ಬಳಿಗೆ ಹೋಗಿ, "ಆಂ! ಸಿಕ್ಕಿದೆಯಾ ಪಕ್ಕಾ ಕಳ್ಳೀ!" ಎಂದನು ಹಲ್ಲು ಕಡಿಯುತ್ತ.

ಅವಳು ಸ್ವಲವೂ ಭಯಪಡದೆ, "ನಾನು ಸಿಕ್ಕಿಬೀಳುವುದಲ್ಲ. ನಿನ್ನನ್ನೇ ಕಾದುಕೊಂಡಿದ್ದೇನೆ. ಅಂತೂ ಕಡೆಗೆ ನಾನು ನಿನ್ನನ್ನು ಕಂಡುಹಿಡಿದುಬಿಟ್ಟೆ!" ಎಂದಳು ನಗುತ್ತಾ.

"ನಿನ್ನ ಕಾರಣದಿಂದ ನಾನು ಎಂಥಾ ಕಷ್ಟಕ್ಕೆ ಸಿಕ್ಕಿಬಿದ್ದೆ! ಹಾಳಾದವಳೇ!" ಎಂದ ಕಾವಲುಭಟ.

"ನಿನ್ನಿಂದ ನನಗೆ ಮಾತ್ರ ಕಡಿಮೆ ಕಷ್ಟ ಬಂತೆನ್ನುವೆಯೇನು?" ಎಂದು ಅವಳು ತಿರುಗಿ ಕೇಳಿದಳು.

"ನನ್ನಿಂದ ನಿನಗೆ ಕಷ್ಟವೇ? ಅದೆಂಥಾದ್ದು?" ಎಂದನು ಕಾವಲುಭಟ ದೊಡ್ಡ ಕಣ್ಣುಗಳನ್ನು ಮಾಡಿ.

ಅವಳು ಒಂದೆರಡು ಕ್ಷಣ ಮುಗುಳುನಗುತ್ತ ಸುಮ್ಮನಿದ್ದು. ಆಮೇಲೆ, "ನೀನು ಎಷ್ಟು ಸರಳ ಗುಣದವನಪ್ಪ! ನಾನು ಕಿಟಕಿಗೇ ಮುಖವಿಟ್ಟು ಏಕೆ ಬೀದಿಯನ್ನೇ ನೋಡುತ್ತಿದ್ದೆ ಅಂದುಕೊಂಡಿ? ಎಂದೋ ಒಂದು ದಿನ ನೀನು ಈ ಬೀದಿಗೆ ಬರುವಿ ಎಂದು ನನಗೆ ಗೊತ್ತೇ ಇತ್ತು!" ಎಂದಳು.

"ಅರ್ಥವಿಲ್ಲದೆ ಬಾಯಿಗೆ ಬಂದ ಹಾಗೆ ಮಾತಾಡಬೇಡ. ನನ್ನ ಸಹಾಯದಿಂದ ಖಾಜೀಯ ಮನೆಗೆ ಸೇರಿ ಅವರ ಮನೆಯೊಳಗಿದ್ದುದನ್ನೆಲ್ಲಾ ಕೊಳ್ಳೆ ಹೊಡೆದ್ದಿರುವಿ. ನಿನಗೆ ನನ್ನೊಂದಿಗೆ ಇನ್ನೇನು ಕೆಲಸ?" ಎಂದು ಕೇಳಿದನು ಕಾವಲುಭಟ.



"ಖಾಜೀ ಅನ್ಯಾಯವಾಗಿ ಸಂಪಾದಿಸಿದ ಧನವನ್ನು ದೋಚಿಕೊಂಡದ್ದೇನೋ ನಿಜವೇ. ಅಂಥ ಕೆಲಸ ಏಕೆ ಮಾಡಿದೆನೆಂದುಕೊಂಡಿರುವಿ? ನಾವಿಬ್ಬರೂ ಮದುವೆ ಮಾಡಿಕೊಂಡು, ಆ ಧನದಿಂದ ಸುಖವಾಗಿ ಬದುಕಬಹುದೆಂಬ ಆಶೆಯಿಂದಲೇ. ಇಕೋ ಇಲ್ಲಿ ನೋಡು!" ಎಂದು ಅವಳು ಅಲ್ಲಿದ್ದ ಒಂದು ಕಪಾಟವನ್ನು ತೆರೆದಳು. ಅದರೊಳಗೆ ತುಂಬಾ ನಗಗಳೂ ನಾಣ್ಯಗಳೂ ಇದ್ದುವು.

ಅದನ್ನು ನೋಡಿ ಕಾವಲುಭಟನು ಕಣ್ಣುಗಳನ್ನು ಅರಳಿಸಿ, ಆ ಧನವನ್ನು ನೋಡುತ್ತ, "ಹೌದು, ಇದೆಲ್ಲಾ ಚೆನ್ನಾಗೇ ಇದೆ. ನಾನಂತೂ ಈಗ ಕಷ್ಟದ ಇಕ್ಕಟ್ಟಿನಲ್ಲಿದ್ದೇನೆ. ಖಾಜೀಯ ಮನೆಯಲ್ಲಿ ನಡೆದ ಕಳ್ಳತನದಲ್ಲಿ ನಿನ್ನೊಂದಿಗೆ ನನಗೂ ಪಾಲಿದೆಯೆಂದು ನನ್ನ ಮೇಲೆ ಅಪರಾಧ ಹಾಕಿದ್ದಾರೆ" ಎಂದನು.

"ಅಷ್ಟೇ ತಾನೇ! ಹೆದರಬೇಡ. ಆ ಖಾಜೀಯೇ ಅಪರಾಧಿ ಎಂದು ಬಹು ಚೆನ್ನಾಗಿ ನಿರೂಪಿಸುವ



ಉಪಾಯ ಒಂದಿದೆ" ಎಂದು ಅವಳು ಕಾವಲು ಭಟನ ಕಿವಿಯಲ್ಲಿ ಏನೇನೋ ಹೇಳಿದಳು.

ಅದನ್ನು ಕೇಳಿ ಕಾವಲುಭಟನು, ಅವಳೊಂದಿಗೆ ಸೇರಿ ಇಬ್ಬರೂ ಸ್ವಲ್ಪ ಹೊತ್ತು ನೆಗಾಡಿದರು. ಆಮೇಲೆ ಕಾವಲುಗಾರನು ಅಲ್ಲಿಂದ ಹೊರಬಿದ್ದು ಕೋತ್ವಾಲನ ಬಳಿಗೆ ಹೋಗಿ, "ಅಯ್ಯಾ, ಆ ಕಳ್ಳ ಹೆಣ್ಣು ಇನ್ನೂ ಆ ಖಾಜೀಯ ಮನೆಯಲ್ಲೇ ಇದ್ದಾಳೆಂದು ಗೊತ್ತಾಗಿದೆ. ಕೆಲವು ಶೋಧನೆ ಮಾಡಿದ ಮೇಲೆ ಇದು ನನಗೆ ಗೊತ್ತಾಗಿದೆ. ದಯಮಾಡಿ ಖಾಜೀಯವರ ಮನೆಯೊಳಗೆಲ್ಲಾ ನಾನು ಸ್ವಲ್ಪ ಹುಡುಕಿ ನೋಡಲು, ಅವಕಾಶ ಮಾಡಿಸಿ ಕೊಡಿರಿ" ಎಂದು ಕೇಳಿಕೊಂಡನು.

ಸರಿಯೆಂದು ಕೋತ್ವಾಲನೂ, ಅವನೊಂದಿಗೆ ಕಾವಲುಭಟನೂ ಕೂಡಿ ಖಾಜೀಯ ಮನೆಗೆ ಹೋದರು. ಸಂಗತಿಯನ್ನು ತಿಳಿದು ಖಾಜೀಗೆ ಆಶ್ಚರ್ಯವೂ ಕೋಪವೂ ಉಂಟಾಯಿತು. ಆದರೂ ಕೋತ್ವಾಲನೇ ಬಂದಿರುವಾಗ ಮನೆಯೊಳಗೆಲ್ಲಾ ಹುಡುಕಿ ನೋಡಲು ಒಪ್ಪಿದನು.

ಕಾವಲುಭಟನು ಮನೆಯೊಳಗಿನ ಎಲ್ಲಾ ಕೋಣೆಗಳನ್ನೂ ಹುಡುಕುತ್ತ, ಒಂದು ಕೋಣೆಯೊಳಗಿದ್ದ ದೊಡ್ಡದೊಂದು ಮರದ ಪೆಟ್ಟಿಗೆಯ ಹಿಂದೆ ಬಗ್ಗಿ ನೋಡುತ್ತ, ಖಾಜೀಯನ್ನು ಕುರಿತು, "ಅಯ್ಯಾ, ಆ ಸ್ತ್ರೀ ಧರಿಸಿಕೊಂಡ ದುಸ್ತಿನ ಬಣ್ಣ ಯಾವುದು ಗೊತ್ತಿದೆಯೇ ?" ಎಂದು ಕೇಳಿದನು.

"ಹಸಿರು ಬಣ್ಣದ ದುಸ್ತು ಅಂತ ನನ್ನ ನೆನಪು. ಏಕೆ ?" ಎಂದನು ಖಾಜೀ.

ಕೂಡಲೇ ಕಾವಲುಭಟನು ಆ ಪೆಟ್ಟಿಗೆಯ ಹಿಂದಿನಿಂದ ಸ್ತ್ರೀಯರು ಧರಿಸುವ ಒಂದು ದುಸ್ತನ್ನು ಹೊರಕ್ಕೆ ಎಳೆದನು. ಅದರ ಬಣ್ಣ ಹಸಿರಾಗಿತ್ತು. ಅದು ಅಲ್ಲಲ್ಲಿ ನೆತ್ತರಿನ ಕಲೆಗಳಿಂದ ಕೂಡಿದ್ದಿತು.

ಅದನ್ನು ನೋಡಿ ಖಾಜೀಯೂ ಕೋತ್ವಾಲನೂ ಬೆರಗಾದರು. ಎರಡು ಮೂರು ನಿಮಿಷಗಳವರೆಗೆ ಯಾರ ಬಾಯಿಯಿಂದಲೂ ಮಾತೇ ಹೊರಡಲಿಲ್ಲ.

ಆಮೇಲೆ ಕೋತ್ವಾಲನು ಗಂಟಲು ಕೆನೆದು ಕಣ್ಣರಳಿಸಿ ಗಟ್ಟಿಯಾಗಿ, "ಖಾಜೀಯವರೇ ! ನೀವು ಆ ಹೆಂಗುಸನ್ನು ಕೊಂದು ಹೆಣವನ್ನು ಮಾಯ ಮಾಡಿದ್ದೀರಿ. ಏಕೆ ಕೊಂದಿರಿ ಅವಳನ್ನು ?" ಎಂದು ಕೇಳಿದನು.

"ಕೊಲ್ಲುವುದೇ ? ನಾನೇ ? ಅವಳನ್ನು ನಾನು ಕೊಂದೆನೆಂದೋ ನೀವು ಹೇಳುವಿರಿ ?" ಎಂದು ಖಾಜೀ ಅಲ್ಲಿಯೇ ಕುಸಿದುಬಿದ್ದನು.

ಕೋತ್ವಾಲನು ಅವನನ್ನು ಕನಿಕರದಿಂದ ನೋಡುತ್ತ, ಸಮಾಧಾನಪಡಿಸುವವನಂತೆ, "ಹೆದರಬೇಡಿರಿ. ಈ ಹತ್ಯವನ್ನು ನಿಮ್ಮ ಮನೆಯಲ್ಲಿ ಬೇರೆ ಯಾರಾದರೂ ಮಾಡಿರಬಹುದು. ವಿಚಾರಿಸೋಣ. ನಿಮ್ಮ ಮೇಲೆ ನಾನು ಔದಾರ್ಯದಿಂದಲೇ ಪ್ರವರ್ತಿಸುತ್ತೇನೆ. ನಿಮಗೆ ಯಾವ ತೊಂದರೆಯೂ ಬಾರದಂತೆ ನಾನು

ನೋಡಿಕೊಳ್ಳುತ್ತೇನೆ. ಸದ್ಯ ಈ ಸಂಗತಿ ಗುಟ್ಟಾಗಿರಿಸಿಕೊಳ್ಳೋಣ" ಎಂದು ಕಾವಲುಭಟನೊಂದಿಗೆ, "ಈಗ ನೀನು ನಿರಪರಾಧಿ ಎಂಬುದು ರುಜುವಾಯಿತು. ಈ ಸಂಗತಿಯನ್ನು ಮಾತ್ರ ಯಾರಿಗೂ ಹೇಳಬೇಡ" ಎಂದನು ಆಜ್ಞಾಪಿಸುವವನ ಹಾಗೆ.

"ಅಯ್ಯಾ ! ನಿಮ್ಮ ಆಜ್ಞೆಯನ್ನು ಶಿರಸಾವಹಿಸುತ್ತೇನೆ" ಎಂದನು ಕಾವಲುಭಟ ತೃಪ್ತಿಯಿಂದ.

ತರುವಾಯ ಅವನು ಕೋತ್ವಾಲನ ಜತೆಯಲ್ಲೇ ಖಾಜೀ ಮನೆಯಿಂದ ಹೊರಗೆ ಬಂದು, ತನ್ನ ದಾರಿ ಹಿಡಿದು ಹೋದನು. ಅವನು ಆ ಸ್ತ್ರೀ ಇರುವ ಮನೆಯ ಬೀದಿಗೇ ಹಿಂದಿರುಗಿ ಬಂದನು. ಅವಳ ಸೌಂದರ್ಯವೂ, ಬುದ್ಧಿವಂತಿಕೆಯೂ, ಚಾಕಚಕ್ಯತೆಯೂ ಅತ್ಯದ್ಭುತವೆನಿಸಿದುವು. ಅವಳು ಖಾಜೀಯ ಮನೆಯನ್ನು ಪೂರ್ತಿ ದೋಚಿಕೊಂಡುದಷ್ಟೇ ಅಲ್ಲದೆ, ಅಲ್ಲಿ ತಾನು ಕೊಲೆಯಾಗಿರುವಂತೆ ಜಾಡು ಚಹರೆಗಳನ್ನೂ ಮಾಡಿದ್ದಾಳೆ !

ಕಾವಲುಭಟನು ಅವಳ ಮನೆಗೆ ಹೋಗಿ ನೋಡಿದಾಗ, ಬಾಗಿಲು ಮುಚ್ಚಿ ಚಿಲಕ ಹಾಕಲ್ಪಟ್ಟಿದ್ದಿತು. ಆ ಮನೆಯಲ್ಲಿ ಮೂರು ದಿನಗಳಿಂದ ಅವಳು ಕಾದುಕೊಂಡಿದ್ದುದೇನೋ ನಿಜವೇ. ಈಗ ಬಂದಾಳು ಎಂದುಕೊಂಡು ಬಹಳ ಹೊತ್ತಿನವರೆಗೆ ಇದಿರು ನೋಡಿ ಬೇಸತ್ತನು, ಕಡೆಗೆ ಸಮೀಪದ ಮನೆಯವರ ಹತ್ತಿರ ಹೋಗಿ ಆ ಮನೆಯಲ್ಲಿದ್ದವಳು ಎಲ್ಲಿಗೆ ಹೋದಳೆಂದು ಕೇಳಿದನು.

"ಅವಳೇನು ಆ ಮನೆಯ ಯಜಮಾನಿ ಅಂದುಕೊಂಡಿರಾ ? ಅದು ದುರಸ್ತಿ ಮಾಡಲಿಕ್ಕಾಗಿ ಬಿಟ್ಟಿದ್ದ ಹಾಳು ಮನೆ. ಯಾವಳೋ ಒಬ್ಬಳು ಮೂರು ದಿನಗಳಿಂದ ಅಲ್ಲಿದ್ದಳು ಅಷ್ಟೇ, ಈ ದಿನ ಗಂಟು ಹೊತ್ತುಕೊಂಡು ಹೋದದ್ದನ್ನು ನೋಡಿದೆವು" ಎಂದರು ಸಮೀಪದಲ್ಲಿರುವ ಮನೆಯವರು.

ಆವಾಗಿನಿಂದ ಕಾವಲಿನ ಭಟನು ಬುದ್ಧಿಭ್ರಂಶವಾಗಿ ಅಲ್ಲೀ ಇಲ್ಲಿ ಅಲೆದುಕೊಂಡೇ ಇದ್ದಾನೆ.

ಈ ರೀತಿಯಾದ ಅವನ ಕಥೆಯನ್ನು ಕೇಳಿ ಮರದ ನೆರಳಿನಲ್ಲಿ ಕುಳಿತಿದ್ದ ಗ್ರಾಮಸ್ಥರು "ಅಯ್ಯೋ ಪಾಪ !" ಎಂದರು. "ನಾನು ಆ ನಯವಂಚಕಿಗೆ ಖಾಜೀಯವರ ಮನೆ ಕೊಳ್ಳೆ ಹೊಡೆಯಲು ಸಹಾಯ ಮಾಡಿದೆ. ಗೌರವದಿಂದ ಬದುಕಿದ ಖಾಜೀಯವರ ಪ್ರತಿಷ್ಠೆಗೆ ನನ್ನಿಂದ ಭಾರೀ ಪೆಟ್ಟಾಯಿತು. ಇದಕ್ಕೆಲ್ಲ ಕಾರಣ ನನ್ನ ಬುದ್ಧಿಗೇಡಿತನ ! ದುರಾಶೆ ! ಇಂತಹ ನಾನು ಎಲ್ಲರಂತೆ ಬದುಕಲು ಹೇಗೆ ಸಾಧ್ಯ ? ನೀವೇ ಹೇಳಿರಿ" ಎಂದು ಕೇಳಿದನು ಕಾವಲುಭಟ.

ಗ್ರಾಮಸ್ಥರು ಅವನ ಮೇಲೆ ಕನಿಕರಪಟ್ಟು, ತಮ್ಮೊಂದಿಗೆ ಕುಳ್ಳಿರಿಸಿ, ಅವನಿಗೆ ತಮ್ಮಿಂದಾದಷ್ಟು ಉಪಚಾರವನ್ನು ಮಾಡಿದರು.



# ಅಸಲು ಗುಟ್ಟು

ಸಿರಿಪುರದಲ್ಲಿ ಸಮುದ್ರಗುಪ್ತ ಮತ್ತು ಧನಗುಪ್ತ ಎಂಬ ವರ್ತಕರು ಮಿತ್ರರಾಗಿದ್ದರು. ಅವರು ವ್ಯಾಪಾರದ ಮೇಲೆ ಹಡಗುಗಳಲ್ಲಿ ಪರದೇಶಗಳಿಗೆ ಹೋಗಿ ಬರುತ್ತಾ ಇರುವವರು.

ಒಂದು ಸಾರಿ ಅವರು ಹಡಗಿನಲ್ಲಿ ಪರದೇಶಗಳಿಂದ ಸಿರಿಪುರಕ್ಕೆ ಹಿಂದಿರುಗಿ ಬರುತ್ತಿರುವಾಗ ಧನಗುಪ್ತನು ಸಮುದ್ರಗುಪ್ತನಿಗೆ ಎರಡು ವಜ್ರಗಳನ್ನು ತೋರಿಸಿ, "ಮೊದಲನೇ ಸಾರಿಯಾಗಿ ನನ್ನ ಹತ್ತಿರವಿದ್ದ ಎಲ್ಲಾ ಧನವನ್ನೂ ಕೊಟ್ಟು ಈ ವಜ್ರಗಳನ್ನು ಕೊಂಡುಕೊಂಡಿದ್ದೇನೆ. ಈಗ ಯಾಕೋ ಸಮುದ್ರ ಚೋರರ ಭಯ ನನ್ನನ್ನು ಹಿಡಿದಿದೆ. ಏನು ಮಾಡಲಿ ?" ಎಂದನು.

"ಹೆದರಬೇಡ. ಸೊಂಟಕ್ಕೆ ಸುತ್ತಿದ ಬಟ್ಟೆಯ ಮಡಿಕೆಯೊಳಗೆ ಇಟ್ಟುಕೋ" ಎಂದು ಸಮುದ್ರಗುಪ್ತನು ಸಲಹೆ ಮಾಡಿದನು.

ಭಯಪಟ್ಟಂತೆ ಮರುದಿನ ಸಮುದ್ರ ಚೋರರು ಅವರ ಹಡಗನ್ನು ಅಟಾಕಾಯಿಸಿ ಹಡಗಿನಲ್ಲಿ ಏರಿ, ಅವರ ಹತ್ತಿರ ಬಂದರು. ಕಳ್ಳರ ನಾಯಕನು ಅವರೊಂದಿಗೆ, "ವೃಥಾ ದುರ್ಮರಣ ಹೊಂದಬೇಡಿ. ನಿಮ್ಮ ಹತ್ತಿರವಿರುವ ಬೆಲೆಬಾಳುವ ವಸ್ತುಗಳನ್ನೆಲ್ಲ ಕೊಟ್ಟುಬಿಡಿ" ಎಂದನು ಕತ್ತಿಯನ್ನು ತೋರಿಸುತ್ತ.

ಸಮುದ್ರಗುಪ್ತನೂ ಧನಗುಪ್ತನೂ ತಾವು ಪರದೇಶಗಳಲ್ಲಿ ಕೊಂಡುಕೊಂಡ ವಸ್ತುಗಳು ತುಂಬಿದ ಚೀಲಗಳನ್ನೂ, ಪೆಟ್ಟಿಗೆಗಳನ್ನೂ ಕಳ್ಳರ ನಾಯಕನಿಗೆ ಒಪ್ಪಿಸಿದರು.

"ಎಲ್ಲಾ ಕೊಟ್ಟಿರಾ ? ಇನ್ನೇನಾದರೂ ಅಡಗಿಸಿಟ್ಟುಕೊಂಡಿದ್ದೀರಾ ?" ಎಂದು ಕಳ್ಳರ ನಾಯಕನು ಅವರನ್ನು ಸಮೀಪಿಸ ತೊಡಗಿದನು.

ಆಗ ಸಮುದ್ರಗುಪ್ತನು ಧನಗುಪ್ತನೊಂದಿಗೆ "ಪ್ರಾಣಕ್ಕಿಂತ ಹೆಚ್ಚಿಗೆ ಏನಿದೆ ? ಆ ಎರಡು ವಜ್ರಗಳನ್ನು ಕೂಡಾ ಕೊಟ್ಟು ಬಿಡು" ಎಂದನು.

ಧನಗುಪ್ತನು ಸೊಂಟದಲ್ಲಿ ಅಡಗಿಸಿಟ್ಟುಕೊಂಡ ವಜ್ರಗಳನ್ನು ತೆಗೆದು ಕಳ್ಳರ ನಾಯಕನಿಗೆ ಕೊಟ್ಟುಬಿಟ್ಟನು. ಕಳ್ಳರೆಲ್ಲ ಹೊರಟು ಹೋದ ಮೇಲೆ ಅವನು ಸಮುದ್ರಗುಪ್ತನೊಂದಿಗೆ ಕೋಪದಿಂದ, "ನೀನು ಇಷ್ಟು ದೊಡ್ಡ ವಿಶ್ವಾಸ ಘಾತ ಮಾಡುವವನೆಂದು ನಾನು ತಿಳಿದಿರಲಿಲ್ಲ" ಎಂದನು.

ಸಮುದ್ರಗುಪ್ತನು ತನ್ನ ಸೊಂಟಕ್ಕೆ ಬಿಗಿದುಕೊಂಡಿದ್ದ ಚರ್ಮದ ಪಟ್ಟಿಯನ್ನು ಬಿಚ್ಚಿ ಅವನಿಗೆ ತೋರಿಸುತ್ತ, "ಇಲ್ಲಿ ನೋಡು. ಇದರಲ್ಲಿ ನೀನು ಕೊಂಡುಕೊಂಡ ವಜ್ರಗಳಿಗಿಂತಲೂ ಹೆಚ್ಚು ಬೆಲೆಯ ಇಪ್ಪತ್ತು ವಜ್ರಗಳಿವೆ. ನಾಲ್ಕು ವಜ್ರಗಳನ್ನು ನೀನು ತೆಗೆದುಕೋ. ಕಳ್ಳರ ನಾಯಕನ ಮುಂದೆ ನಾನು ಹಾಗೆ ಏಕೆ ಹೇಳಿದೆನೆಂಬುದರ ಅಸಲು ಗುಟ್ಟು ಇದೇ. ನಾನು ಹಾಗೆ ಹೇಳದೇ ಇದ್ದಿದ್ದರೆ ನಿನ್ನನ್ನು ಮಾತ್ರವಲ್ಲದೆ, ನನ್ನನ್ನೂ ಝಡತೀ ಮಾಡಿ ಇಬ್ಬರದೂ ಮೊತ್ತ ವಜ್ರಗಳನ್ನೇ ಎತ್ತಿಕೊಂಡು ಹೋಗುತ್ತಿದ್ದ !" ಎಂದನು.





# ಶಿವಪುರಾಣ

ಈ ಪ್ರಪಂಚವು ಸೃಷ್ಟಿಯಾಗುವುದಕ್ಕಿಂತ ಮೊದಲು ಬರಿಯ ನೀರಿನ ಹೊರತು ಬೇರೆ ಯಾವ ವಸ್ತುಗಳೂ ಇರಲಿಲ್ಲ. ಸರ್ವಶೂನ್ಯವಾದ ಅಂಧಕಾರವೇ ಎಲ್ಲೆಲ್ಲೂ ಕವಿದಿತ್ತು. ಆ ಅಂಧಕಾರದೊಳಗೆ ಒಂದಾನೊಂದು ತೇಜಸ್ಸು ಒಂದು ಕಡೆಯಲ್ಲಿ ಕಾಣುತ್ತಿತ್ತು. ಕಾಲಕ್ರಮದಲ್ಲಿ ಅದು ಜ್ಯೋತಿರ್ಲಿಂಗದ ಆಕಾರವನ್ನು ತಾಳಿತು. ಅದುವೇ ಶಿವಪರಮೇಶ್ವರನ ಲಿಂಗಾಕೃತಿ. ಆ ಜ್ಯೋತಿರ್ಲಿಂಗದ ಅರ್ಧಭಾಗದಿಂದ ಮಹಾಶಕ್ತಿಯೊಂದು ಹುಟ್ಟಿತು. ಆ ಮಹಾಶಕ್ತಿಯನ್ನೇ ಪ್ರಕೃತಿ ಎಂದೂ, ಮಹಾಮಾಯೆ ಎಂದೂ ಕರೆಯುತ್ತಾರೆ. ಜ್ಯೋತಿರ್ಲಿಂಗದೊಂದಿಗೇ ಇದ್ದುದರಿಂದ ಪರಮೇಶ್ವರಿ ಎಂತಲೂ ಹೇಳುತ್ತಾರೆ.

ಕಾಲಕ್ರಮದಲ್ಲಿ ಪರಮೇಶ್ವರೀ ಪರಮೇಶ್ವರರು ಮಹಾವಿಷ್ಣುವನ್ನು ಸೃಷ್ಟಿ ಮಾಡಿದರು. ಆ ಮಹಾವಿಷ್ಣುವಿನ ನಾಭಿಯೊಳಗಿನಿಂದ ಮಹಾ ಪದ್ಮವೊಂದು ಹುಟ್ಟಿಕೊಂಡು ಬಂತು. ಅದು ಅನೇಕ ಸಾವಿರ ಯೋಜನಗಳಷ್ಟು ನೀಳವಾಗಿ ಅತ್ಯಾಶ್ಚರ್ಯಕರವಾಗಿದ್ದಿತು. ಆ ಮಹಾ ಪದ್ಮದಲ್ಲಿ ಐದು ಮುಖಗಳೊಂದಿಗೆ ಕೂಡಿದ ಬ್ರಹ್ಮನು ಹುಟ್ಟಿದನು. ಆ ಬ್ರಹ್ಮನ ಜತೆಯಲ್ಲಿಯೇ ಸರಸ್ವತಿಯೂ ಹುಟ್ಟಿದಳು.

ಪ್ರ ಪಂ ಚ ವೆ ಲ್ಲಾ ಜಲಮಯವಾಗಿರುವುದನ್ನು ಗಮನಿಸಿ ಬ್ರಹ್ಮನಿಗೆ ಯೋಚನೆಯುಂಟಾಯಿತು. ತನ್ನ ಜನ್ಮಸ್ಥಾನವಾದ ಮಹಾಪದ್ಮದ ಆದಿ ಅಂತಗಳನ್ನು ತಿಳಿಯಬೇಕೆಂದುಕೊಂಡು ಬ್ರಹ್ಮನು, ಅದರ ನಾಳವನ್ನು ಹಿಡಿದು ಊರ್ಧ್ವ ಹಾಗು ಅಧೋಲೋಕಗಳ ನಡುವೆ ಅನೇಕಬಾರಿ ಹೋಗಿ ತನ್ನ ಪದ್ಮಗರ್ಭವನ್ನು ಸೇರಿ ಏನೂ ತಿಳಿಯದೆ ಕುಳಿತನು. ತನ್ನಂತೆಯೇ ಅವನ ಬಾಯಿಯಿಂದ ಓಂಕಾರ ನಾದವು ಹೊರಡ ತೊಡಗಿತು. ಅವನ ಓಂಕಾರ ಜಪಕ್ಕೆ ಪ್ರತಿಫಲವಾಗಿ ವಿಷ್ಣು ಅವನ ಇದಿರಿನಲ್ಲಿ ಪ್ರತ್ಯಕ್ಷನಾಗಿ ನಿಂತನು. ಸೃಷ್ಟಿಯಲ್ಲಿ ತಾನೇ ಮೊದಲಿನವನೆಂದು ತಿಳಿದುಕೊಂಡಿದ್ದ ಬ್ರಹ್ಮನು ವಿಷ್ಣುವನ್ನು ನೋಡಿ ಆಶ್ಚರಿಗೊಂಡು "ಯಾರು ನೀನು ? ಎಲ್ಲಿಂದ ಬಂದೆ ? ಏಕೆ ಬಂದೆ? " ಎಂದು ಕೇಳಿದನು.

## ೧. ದಕ್ಷಯಜ್ಞ



"ಪ್ರಪಂಚವನ್ನು ಸೃಷ್ಟಿಸುವ ಕಾರ್ಯಕ್ಕಾಗಿ ನಾನು ನಿನ್ನನ್ನು ನನ್ನ ನಾಭಿಯಿಂದ ಹುಟ್ಟಿಸಿದೆನು. ನಾನು ವಿಷ್ಣು" ಎಂದನು ವಿಷ್ಣು.

ಬ್ರಹ್ಮನು ಅಹಂಕಾರದಿಂದ, "ನನ್ನ ಮುಂದೆ ನಿನ್ನ ಜಂಭದ ಮಾತುಗಳನ್ನು ಹೇಳಬೇಡ. ಸಾಧ್ಯವಿದ್ದರೆ ನನ್ನೊಂದಿಗೆ ಯುದ್ಧಕ್ಕೆ ಬಾ. ನಾನು ಸ್ವಯಂಭೂ ಆಗಿ ಹುಟ್ಟಿದವನು, ಜಗತ್ಕರ್ತೃ ನಾನೇ" ಎಂದನು.

ಆಗ ವಿಷ್ಣು "ನಿಜವು ಈಗಲೇ ತಿಳಿಯುತ್ತದೆ" ಎಂದು ಶಿವನನ್ನು ಧ್ಯಾನಿಸಿದನು. ಪರಮೇಶ್ವರನು ಜ್ವಾಲಾಲಿಂಗ ರೂಪದಲ್ಲಿ ಬ್ರಹ್ಮ ವಿಷ್ಣುಗಳ ನಡುವೆ ಪ್ರತ್ಯಕ್ಷನಾದನು. ಆಗ ವಿಷ್ಣು, ಬ್ರಹ್ಮನೊಂದಿಗೆ "ಈ ಜ್ವಾಲಾಲಿಂಗದ ಆದಿ ಅಂತಗಳನ್ನು ಕಂಡು ಹಿಡಿಯಲು ನಾವಿಬ್ಬರೂ ಹೊರಡೋಣ. ಯಾರು ಕಂಡು ಹಿಡಿಯುವರೋ ಅವರೇ ದೊಡ್ಡವರು" ಎಂದನು. ಬ್ರಹ್ಮನು ಆಗಬಹುದೆಂದನು. ಆದರೆ ಆ ಪ್ರಯತ್ನದಲ್ಲಿ ಇಬ್ಬರೂ ಸೋತುಹೋಗಿ ಯಥಾಸ್ಥಾನಕ್ಕೆ ತಿರುಗಿಬಂದು, ಪರಮೇಶ್ವರನನ್ನೇ ಪ್ರಾರ್ಥನೆ ಮಾಡ ತೊಡಗಿದನು.

ಪರಮೇಶ್ವರನು ಅವರ ಮುಂದೆ ಐದು ಮುಖಗಳಿಂದ ಪ್ರತ್ಯಕ್ಷನಾಗಿ, "ಬ್ರಹ್ಮಾ, ನೀನು ಪಂಚಭೂತಾತ್ಮಕವಾದ ಪ್ರಪಂಚವನ್ನು ಸೃಷ್ಟಿಸಲಿಕ್ಕಾಗಿ ಈ ವಿಷ್ಣುವಿನ ನಾಭೀ ಕಮಲದಲ್ಲಿ ನನ್ನ ಆದೇಶಾನುಸಾರವಾಗಿ ಹುಟ್ಟಿಸಲ್ಪಟ್ಟವನು. ಆದುದರಿಂದ ನೀನು ಸೃಷ್ಟಿ ಕಾರ್ಯವನ್ನು ಪ್ರಾರಂಭಿಸಬೇಕು. ಅದೇ ನಿನ್ನ ಕೆಲಸ" ಎಂದನು.

ಅದನ್ನು ಕೇಳಿ ಬ್ರಹ್ಮನು ಪರಮೇಶ್ವರನನ್ನು ನೋಡಿ, "ಹೀಗೆ ಆಜ್ಞೆಮಾಡುವ ನೀನು ಯಾರು? ನನಗೆ ಸಮಾನನಾಗಿ ನಿನಗೆ ಐದು ಮುಖಗಳು ಏಕೆ ಬಂದಿವೆ? ನಾನು ಸೃಷ್ಟಿ ಕಾರ್ಯ ನಡೆಸುವ ಸೃಷ್ಟಿಕರ್ತನಾದುದರಿಂದ ನನಗೆ ಎಲ್ಲಾ ದಿಕ್ಕುಗಳೂ ಕಾಣುವಂತೆ ಐದು ಮುಖಗಳಿರಬೇಕಾದ್ದು ನ್ಯಾಯ. ನಿನಗೇಕೆ?" ಎಂದು ಕೇಳಿದನು.

ಆ ಪ್ರಶ್ನೆಯಿಂದ ಪರಮೇಶ್ವರನು ರುದ್ರಾವತಾರ ತಾಳಿದನು. ತನ್ನ ಎಡಗೈಯ ಕಿರಿಬೆರಳಿನ ಉಗುರನ್ನೇ ಕತ್ತಿಯ ಹಾಗೆ ಮಾಡಿ ಬ್ರಹ್ಮನ ಐದನೆಯ ತಲೆಯನ್ನು ಕಡಿದು ಹಾಕಿದನು. ಅದರಿಂದ ಬ್ರಹ್ಮನ ಅಹಂಕಾರವು ಅಳಿಯಿತು. ರಕ್ಷಿಸುವಂತೆ ಕೈಜೋಡಿಸಿ ಪರಮೇಶ್ವರನನ್ನು ಪ್ರಾರ್ಥಿಸಿದನು ಬ್ರಹ್ಮ.

ಪರಮೇಶ್ವರನು ರೌದ್ರತೆಯನ್ನು ಬಿಟ್ಟು, ಸೌಮ್ಯ ರೂಪನಾಗಿ ಶಾಂತತೆಯಿಂದ, "ಓ ಬ್ರಹ್ಮಾ, ಸೃಷ್ಟಿ ಕಾರ್ಯಕ್ಕೆ ನೀನೂ, ಆ ಸೃಷ್ಟಿಯನ್ನು ರಕ್ಷಿಸುವ ಕಾರ್ಯಕ್ಕೆ ವಿಷ್ಣುವೂ ಸೃಷ್ಟಿಸಲ್ಪಟ್ಟಿರುವಿರೆಂದು ತಿಳಿಯಿರಿ. ನಾನು ಲಯಕಾರಕನಾಗಿ ರುದ್ರನಾಗಿಯೂ, ಶಿವನಾಗಿಯೂ, ಈಶ್ವರನಾಗಿಯೂ ಕರೆಯಿಸಿ ಕೊಳ್ಳುತ್ತೇನೆ. ಜ್ವಾಲಾಲಿಂಗವನ್ನೇ ಪಾರ್ಥಿವಲಿಂಗವೆಂದೂ, ಶಿವಲಿಂಗವೆಂದೂ ಪೂಜಿಸತಕ್ಕದ್ದು. ನಾನು

ಯಾವಾಗಲೂ ಲಿಂಗೈಕ್ಯನಾಗಿರುತ್ತೇನೆ." ಎಂದು ಹೇಳಿ ಜ್ವಾಲಾಲಿಂಗದೊಳಗೆ ಐಕ್ಯವಾಗಿ ಹೋದನು.

ಆಮೇಲೆ ಬ್ರಹ್ಮನು ವಿಷ್ಣುವಿನಿಂದ ವೇದಗಳೇ ಮೊದಲಾದುವನ್ನು ತೆಗೆದುಕೊಂಡು, ಪದ್ಮಾಸನದ ಮೇಲೆ ಕುಳಿತು ಓಂಕಾರವನ್ನು ಜಪಿಸಿಕೊಂಡಿರುವಾಗ, ನೀರಿನ ಮೇಲೆ ತೇಲುತ್ತಾ ಒಂದು ಮೊಟ್ಟೆ ಬ್ರಹ್ಮನ ಕಡೆಗೆ ಬಂದಿತು. ಬ್ರಹ್ಮನು ಅದನ್ನು ಆಶ್ಚರ್ಯದಿಂದ ನೋಡಿದನು. ಅಷ್ಟರಲ್ಲಿ ಆ ಮೊಟ್ಟೆಯಿಂದ 'ಓಂ' ಎಂಬ ಶಬ್ದವು ಹೊರಡ ತೊಡಗಿತು. ಬ್ರಹ್ಮನು ಕುತೂಹಲದಿಂದ ಆ ಓಂಕಾರವನ್ನು ಹಿಡಿದು ಹೋಗಿ ಮೊಟ್ಟೆಯೊಳಗೆ ಸೇರಿಕೊಂಡನು. ಮೊಟ್ಟೆಯೊಳಗೆಲ್ಲಾ ಗಾಢಾಂಧಕಾರವೇ ಇಡುಗಿಕೊಂಡಿತ್ತು. ಬ್ರಹ್ಮನು ಅದರೊಳಗೆ ತನ್ನ ಶರೀರವನ್ನು ವಿಸರ್ಜಿಸಿ ಚತುರ್ಮುಖನಾಗಿ ಮತ್ತೆ ಹುಟ್ಟಿದನು. ಹೀಗೆ ಬ್ರಹ್ಮನು ಅಂಡದೊಳಗಿನಿಂದ ಹೊರಗೆ ಬರುವಾಗ ಅಂಡವು ಎರಡು ಭಾಗವಾಗಿ ಸೀಳಿ ಕೆಳಗಿನ ಭಾಗವು ಭೂಮಿಯಾಗಿ, ಮೇಲಿನ ಭಾಗವು ಆಕಾಶವಾಗಿ ಕಾಣತೊಡಗಿತು. ಆ ಹೊತ್ತಿಗೆ ನೀರೆಲ್ಲಾ ಇಂಗಿಹೋಗಿತ್ತು.

ಇದನ್ನು ನೋಡಿ ಬ್ರಹ್ಮನು ಬಹಳ ಸಂತೋಷಪಟ್ಟು, ಭೂಮಿಯ ಮೇಲೆ ಸಮಸ್ತ ಚರಾಚರಗಳನ್ನೂ ಸೃಷ್ಟಿ ಮಾಡಲು ಪ್ರಾರಂಭಿಸಿದನು. ಬ್ರಹ್ಮನು ಸೃಷ್ಟಿ ಮಾಡಿದ ಮೊದಲನೆಯವರು ಸನಕ, ಸನಂದನಾದಿಗಳೇ. ಅವರು ಸೃಷ್ಟಿ ಮಾಡುವುದರಲ್ಲಿ ಯಾವ ಆಸಕ್ತಿಯನ್ನೂ ತೋರಿಸದೆ ಪರಮೇಶ್ವರನನ್ನು ಧ್ಯಾನಿಸುತ್ತ ತಪಸ್ಸುಮಾಡಲು ಹೊರಟುಹೋದರು. ಅದನ್ನು ನೋಡಿ ಬ್ರಹ್ಮನು ಗಟ್ಟಿಯಾಗಿ ರೋದನ ಮಾಡ ತೊಡಗಿದನು.

ಬ್ರಹ್ಮನು ಕಣ್ಣೀರು ಸುರಿಸುತ್ತಾ, ಒಂದೇ ಸಮನೆ ರೋದಿಸಿಕೊಂಡಿರುವಾಗ, ಅವನ ಕಣ್ಣೀರಿನಿಂದ ಮಹಾ ತೇಜಸ್ಸಿನೊಂದಿಗೆ ಶಿವನು ಹುಟ್ಟಿದನು.



ಶಿವನು ಬೆಳಗಿನ ಪ್ರಕಾಶವಂತನಾಗಿ ಹತ್ತು ದಿಕ್ಕುಗಳನ್ನೂ ಬೆಳಗಿಸುವುದನ್ನು ನೋಡಿ ಬ್ರಹ್ಮನು, ಆಶ್ಚರ್ಯಪಡುತ್ತ, "ಯಾರು ನೀನು?" ಎಂದು ಪ್ರಶ್ನಿಸಿದನು.

"ನಾನು ಶಿವನು, ರುದ್ರನು, ಪರಮೇಶ್ವರನು" ಎಂದು ಉತ್ತರಿಸಿದನು ಶಿವ.

ಆಗಲೇ ವಿಷ್ಣು ಕೂಡಾ ಅಲ್ಲಿ ಪ್ರತ್ಯಕ್ಷನಾಗಿ, "ಬ್ರಹ್ಮಾ! ನೀನು ಸೃಷ್ಟಿಸಿ, ನಾನು ಪೋಷಿಸುವ ಎಲ್ಲಾ ಚರಾಚರಗಳನ್ನೂ ಲಯಮಾಡಲು ಆ ಶಿವನೇ ಈಗ ಈ ರೂಪದಲ್ಲಿ ಹುಟ್ಟಿದ್ದಾನೆ" ಎಂದನು.

ಆ ಮೇಲೆ ಆ ಮೂವರಿಗೂ ವಾಸಸ್ಥಳಗಳು ನಿರ್ಣಯವಾದುವು. ಬ್ರಹ್ಮನಿಗೆ ಸತ್ಯಲೋಕವೂ, ವಿಷ್ಣುವಿಗೆ ವೈಕುಂಠವೂ, ಶಿವನಿಗೆ ಕೈಲಾಸವೂ ವಾಸಸ್ಥಳಗಳೆಂದು ಗೊತ್ತಾಯಿತು. ಅದರಂತೆ ಬ್ರಹ್ಮನು ಸತ್ಯಲೋಕಕ್ಕೆ ಹೋಗಿ ತನಗೆ ಸಹಾಯಕರಾಗಿ ಮರೀಚಿ, ಕಶ್ಯಪ, ದಕ್ಷ, ಗೌತಮ, ವಸಿಷ್ಠ, ಕರ್ದಮ



ಮೊದಲಾದ ಒಂಬತ್ತು ಮಂದಿಗಳನ್ನು ಉಪ ಬ್ರಹ್ಮರೆಂದು ಸೃಷ್ಟಿ ಮಾಡಿದನು.

ಇವರಲ್ಲಿ ದಕ್ಷನಿಗೆ ಅರವತ್ತನಾಲ್ಕು ಮಂದಿ ಕುಮಾರಿಯರಾದರು. ಆ ಕುಮಾರಿಯರಲ್ಲಿ ಅದಿತಿ ಮೊದಲಾದ ಹತ್ತು ಕನ್ನೆಯರನ್ನು ಕಶ್ಯಪನು ಮದುವೆ ಮಾಡಿಕೊಂಡನು. ಆದರಿಂದ ಅನೇಕ ಮಕ್ಕಳನ್ನು ಪಡೆದನು. ಅವನ ಹೆಂಡತಿಯರಲ್ಲಿ ಅದಿತಿಗೆ ಇಂದ್ರನೇ ಮೊದಲಾದ ದೇವತೆಗಳು ಹುಟ್ಟಿದರು. ದಿತಿಗೆ ಹುಟ್ಟಿದ ಮಕ್ಕಳು ದೈತ್ಯರೆಂದು ಹೆಸರು ಪಡೆದರು, ವಿನತೆ ಎಂಬವಳಿಗೆ ಗರುತ್ಮಂತನೂ, ಅನೂರುವೂ ಕುಮಾರರಾಗಿ ಹುಟ್ಟಿದರು. ಕದ್ರು ಎಂಬವಳಿಗೆ ಸರ್ಪಗಳು ಮಕ್ಕಳಾಗಿ ಹುಟ್ಟಿದುವು. ಸ್ವನಾ ಎಂಬ ಕಶ್ಯಪನ ಹೆಂಡತಿಯಿಂದ ಯಕ್ಷರೂ, ರಾಕ್ಷಸರೂ ಹುಟ್ಟಿದರು.

ಶಿವನನ್ನೇ ಮದುವೆಯಾಗಬೇಕೆಂಬ ಬಯಕೆಯಿಂದ ಮಹೇಶ್ವರಿ ದಕ್ಷನ ಮಗಳಾಗಿ ಸತೀ ಎಂಬ ಹೆಸರಿನಿಂದ ಹುಟ್ಟಿದಳು. ಅವಳ ಬಯಕೆಯಂತೆಯೇ ಅವಳು ಶಿವನನ್ನೇ ಮದುವೆ ಮಾಡಿಕೊಂಡಳು. ಆ ವಿವಾಹ ಸಮಯದಲ್ಲಿ ಬ್ರಹ್ಮ, ವಿಷ್ಣು ಇಂದ್ರ ಮೊದಲಾದ ದೇವತೆಗಳೆಲ್ಲಾ ಬಂದು ಸತೀಶಿವರನ್ನು ಅನೇಕ ವಿಧವಾಗಿ ಸ್ತೋತ್ರ ಮಾಡಿದರು. ಬಂದವರನ್ನೆಲ್ಲಾ ಸ್ವಾಗತಿಸಿ ಗೌರವ ಮರ್ಯಾದೆ ಮಾಡಲು ನಂದೀಶ್ವರನನ್ನೂ, ಕಾಲಭೈರವನನ್ನೂ ನಿಯಮಿಸಿ, ಶಿವನು ಸತೀಸಮೇತನಾಗಿ ಕೈಲಾಸಕ್ಕೆ ಹೋಗಿ ಸುಖವಾಗಿರತೊಡಗಿದನು. ಬಂದವರೆಲ್ಲ ಕೈಲಾಸಾಭಿಮುಖವಾಗಿ ಶಿವನನ್ನು ಸ್ತೋತ್ರ ಮಾಡಿ ಹೋಗುತ್ತಿದ್ದರು.

ಹೀಗೆ ಕಾಲವು ಕಳೆಯುತ್ತಿರಲು, ಅನೇಕ ಮಂದಿ ಮಹಾ ಮಹಿಮರೆಲ್ಲಾ ಪ್ರಯಾಗ ನಗರದಲ್ಲಿ ಸೇರಿ, ದೊಡ್ಡದೊಂದು ಯಾಗ ಮಾಡಲು ನಿಶ್ಚಯಿಸಿದರು. ಆ ಯಾಗಕ್ಕೆ ಬ್ರಹ್ಮ, ವಿಷ್ಣು, ಮಹೇಶ್ವರರನ್ನೂ, ಇಂದ್ರಾದಿ ದೇವತೆಗಳನ್ನೂ ಆಹ್ವಾನಮಾಡಿ, ಯಾಗವನ್ನು ಪ್ರಾರಂಭಮಾಡಿದರು.

ಮಹರ್ಷಿಗಳು ಯಜ್ಞ ಸಮಾರಂಭಕ್ಕೆ ಬಂದವರಿಗೆಲ್ಲಾ ಅವರವರಿಗೆ ತಕ್ಕ ವಸತಿಗಳನ್ನು ಏರ್ಪಡಿಸಿ, ಅರ್ಹತೆಗಳಿಗೆ ತಕ್ಕ ಆಸನಗಳನ್ನು ತೋರಿಸಿ ಕುಳ್ಳಿರಿಸಿದರು. ಎಲ್ಲರೂ ಕುಳಿತುಕೊಂಡು ಯಜ್ಞವನ್ನು ನೋಡುತ್ತಾ ಇದ್ದರು. ಆಗ ದಕ್ಷನು ತನ್ನ ಶಿಷ್ಯವೃಂದದೊಂದಿಗೆ ಅಲ್ಲಿಗೆ ಬಂದನು. ಸಭೆಯಲ್ಲಿ ಕುಳಿತವರೆಲ್ಲಾ ಎದ್ದು ನಿಂತು ದಕ್ಷನಿಗೆ ಮರ್ಯಾದೆ ತೋರಿಸಿ, ಇದಿರು ಹೋಗಿ ಕುಶಲ ವಿಚಾರಿಸಿ ಕರೆತಂದು ದಿವ್ಯಾಸನದಲ್ಲಿ ಕೂಡಿಸಿದರು. ದಕ್ಷನು ಸಭೆಯನ್ನೆಲ್ಲಾ ಒಮ್ಮೆ ಕಣ್ಣೋಡಿಸಿ ನೋಡಿದನು. ಬ್ರಹ್ಮ, ವಿಷ್ಣುಗಳಿಗೆ ನಮಸ್ಕಾರ ಮಾಡಿದನು. ತನ್ನ ಅಳಿಯನಾದ ಶಿವನು ತನ್ನ ಆಗಮನವನ್ನು ನೋಡಿ ಎದ್ದು ನಿಂತು ಮರ್ಯಾದೆ ತೋರಿಸಲಿಲ್ಲವೆಂಬುದನ್ನು ಗಮನಿಸಿ ದಕ್ಷನು ಸಭೆಯನ್ನು ನೋಡಿ

"ನೀವೆಲ್ಲರೂ ಎದ್ದು ನಿಂತು ನನ್ನನ್ನು ಗೌರವಿಸಿದ್ದೀರಿ. ಆ ಪರಮೇಶ್ವರನು ನನ್ನ ಅಳಿಯನಾದ ಕಾರಣದಿಂದ ಏಳದೆ, ನನ್ನನ್ನು ಮಾತಾಡಿಸದೆ ನಿರ್ಲಕ್ಷ್ಯಮಾಡಿದ್ದಾನೆ. ಅವನಿಗೆ ಚಿಕ್ಕವರು ದೊಡ್ಡವರು ಎಂಬ ತಾರತಮ್ಯವೇ ತಿಳಿಯದು. ಅಂತಹವನು ಇಲ್ಲಿರುವಾಗ ನಾನಿರುವುದು ಸರಿಯಲ್ಲ" ಎಂದು ಹೇಳಿ ತನ್ನ ಶಿಷ್ಯರನ್ನು ಕರೆದುಕೊಂಡು ಅಲ್ಲಿಂದ ಹೊರಟುಹೋಗ ತೊಡಗಿದನು.

ಅದನ್ನು ನೋಡಿ, ಬ್ರಹ್ಮ, ವಿಷ್ಣು ಮೊದಲಾದವರು ದಕ್ಷನಿಗೆ ಅಡ್ಡ ನಿಂತು ತಡೆದು, "ಅವನು ಈಶ್ವರನು, ಪರಮೇಶ್ವರನು. ಅವನನ್ನು ಈ ವಿಧವಾಗಿ ನಿಂದಿಸುವುದೂ ಅವಮಾನ ಪಡಿಸುವುದೂ ತಪ್ಪು" ಎಂದು ಹೇಳಿದರು.

ಆಗ ಉಕ್ಕುವ ಕೋಪವನ್ನು ತಾಳಲಾಗದೆ ನಂದೀಶ್ವರನು ದೊಡ್ಡ ಕಂಠದಿಂದ, "ಹೇ ದಕ್ಷಾ! ಶಿವದೂಷಣೆ ಮಾಡಿದ ನಿನ್ನ ಮುಖವಿರುವ ತಲೆ ಹಾರಿ ಹೋಗಿ ಹೋಮಕುಂಡದೊಳಗೆ ಬಿದ್ದು ನಾಶವಾಗಲಿ!" ಎಂದು ಶಪಿಸಿದನು.

ಅದನ್ನು ಕೇಳಿ ದಕ್ಷನು ರೇಗಿ, "ನಿನ್ನ ರುದ್ರಗಣಗಳೆಲ್ಲಾ ವೇದಬಾಹ್ಯರಾಗಿ, ಆಚಾರ ಹೀನರಾಗಿ, ಬೂದಿ ಬಳಿದುಕೊಂಡು, ಪಾಷಂಡರೆಂದು ಹೆಸರು ಪಡೆಯಲಿ!" ಎಂದು ಪ್ರತಿಶಾಪ ಕೊಟ್ಟನು. ಈ ಶಾಪ ಪ್ರತಿ ಶಾಪಗಳು ಈಗ ನಡೆಯದೆ, ಈ ಯಜ್ಞವು ಶುಭಸಾಂಗವಾಗಲೆಂದು ಬ್ರಹ್ಮ ವಿಷ್ಣುಗಳು ಪ್ರಾರ್ಥಿಸಿಕೊಂಡರು.

ಯಜ್ಞವು ಪೂರ್ತಿಯಾಗುವವರೆಗೂ ಶಿವನು ಅಲ್ಲಿದ್ದು, ತನ್ನ ರುದ್ರಗಣಗಳನ್ನು ಕರೆದುಕೊಂಡು ಕೈಲಾಸಕ್ಕೆ ಹೊರಟುಹೋದನು.

ಮತ್ತೊಂದು ದಿನ ದಕ್ಷನು ತನ್ನ ಶಿಷ್ಯರಾದ ಭೃಗು ಮೊದಲಾದ ಋಷಿಗಳನ್ನು ಕರೆದು ತನ್ನ ಆಶ್ರಮದಲ್ಲಿ ವಾಜಪೇಯವೆಂಬ ಯಜ್ಞ ಮಾಡಲು



ಪ್ರಾರಂಭಿಸಿದನು. ಅವನಿಗೆ ಶಿವನ ಮೇಲೆ ಬಹಳ ಕೋಪವಿದ್ದಿತು. ಆದುದರಿಂದ ವಾಜಪೇಯ ಯಜ್ಞದಲ್ಲಿ ಶಿವನಿಗೆ ಹವಿರ್ಭಾಗವಿಲ್ಲದಂತೆ ಮಾಡಿದನು.

ಹಾಗೆ ಆ ಯಜ್ಞ ಮಾಡಿ ಮುಗಿಸಿದ ಮೇಲೆಯೂ ದಕ್ಷನಿಗೆ ಶಿವನ ಮೇಲಿನ ಕೋಪ ತಣಿಯಲಿಲ್ಲ. ಆದುದರಿಂದ ಅವನು "ಬೃಹಸ್ಪತಿ ಯಜ್ಞ" ಎಂಬೊಂದು ಮಹಾ ಯಜ್ಞ ಮಾಡಲು ಪ್ರಾರಂಭಿಸಿ, ಅದಕ್ಕೆ ಎಲ್ಲಾ ದೇವತೆಗಳನ್ನೂ, ಮಹರ್ಷಿಗಳನ್ನೂ, ಪಿತೃಗಣಗಳನ್ನೂ, ಅಪ್ಸರಸಿಯರನ್ನೂ, ವಿಶ್ವೇದೇವತೆಗಳನ್ನೂ, ಮರುತ್ತುಗಳನ್ನೂ, ಗಂಧರ್ವ, ಸಿದ್ಧ, ವಿದ್ಯಾಧರ, ಕಿನ್ನರ, ಯಕ್ಷರನ್ನೂ, ಕಶ್ಯಪ, ಅಗಸ್ತ್ಯ, ಅತ್ರಿ, ಭೃಗು, ಮರೀಚಿ, ನಾರದ, ಪರಾಶರಾದಿ ಮಹರ್ಷಿಗಳನ್ನೂ ಆಹ್ವಾನಿಸಿದಂತೆ ಅವರೆಲ್ಲರೂ ಬಂದರು.

ಬ್ರಹ್ಮ, ವಿಷ್ಣುಗಳ ಹೊರತು ಉಳಿದವರೆಲ್ಲಾ ದಕ್ಷನಿಗೆ ಹೆದರಿಯೇ ಬಂದಿದ್ದರು. ದಕ್ಷನು ಶಿವನನ್ನು



ಆಹ್ವಾನಿಸುವುದಿಲ್ಲವೆಂದು ಬ್ರಹ್ಮ ವಿಷ್ಣುಗಳಿಗೆ ಗೊತ್ತಾಗಿತ್ತು. ಯಜ್ಞಕ್ಕೆ ಬಂದವರನ್ನು ಸತ್ಕರಿಸಲು ದಕ್ಷನ ಶಿಷ್ಯರೂ, ವಸತಿಗಳನ್ನು ಏರ್ಪಡಿಸಲು ವಿಶ್ವಕರ್ಮನೂ ನಿಯೋಜಿಸಲ್ಪಟ್ಟಿದ್ದರು.

ದಕ್ಷನು ಯಜ್ಞದೀಕ್ಷೆ ವಹಿಸಿ ಪತ್ನಿಸಮೇತನಾಗಿ ಯಾಗಶಾಲೆಯನ್ನು ಪ್ರವೇಶಿಸಿ ಸಭಾವಂದನೆ ಮಾಡಿದನು. ಕರೆಯದೇ ಇದ್ದುದರಿಂದ ಶಿವನು ಆ ಸಭೆಯಲ್ಲಿ ಇರಲಿಲ್ಲ. ಬ್ರಹ್ಮ ವಿಷ್ಣುಗಳು ಕರೆದರೂ ಬಂದಿರಲಿಲ್ಲ. ಅನೇಕ ಮಂದಿ ದೇವತೆಗಳೊಂದಿಗೆ, ಮಹರ್ಷಿಗಳೊಂದಿಗೆ ತುಂಬಿರುವ ಆ ಮಹಾ ಸಭೆಯಲ್ಲಿ ಶಿವಭಕ್ತರಾದ ಮರೀಚಿ, ದಧೀಚಿ, ಭೃಗು ಮೊದಲಾದ ಮಹರ್ಷಿಗಳು ಸಭೆಯನ್ನೆಲ್ಲಾ ಒಮ್ಮೆ ನೋಡಿ, ದಕ್ಷನನ್ನು ಕುರಿತು, "ಓ ದಕ್ಷಾ, ಈ ಸಭೆಗೆ ಸತೀದೇವಿಯನ್ನೂ, ಶಿವನನ್ನೂ ಕರೆಯಲಿಲ್ಲವೇ? ಅವರು ಇಲ್ಲಿ ಕಾಣುವುದಿಲ್ಲವೇಕೆ?" ಎಂದು ಕೇಳಿದರು.

ಅದಕ್ಕೆ ದಕ್ಷನು, "ಶಿವನು ಕರ್ಮ ಭ್ರಷ್ಟನು. ಆದುದರಿಂದ ಅವನನ್ನು ಕರೆಯಲಿಲ್ಲ. ಅವನು ಅಪವಿತ್ರನು, ಕಪಾಲಧಾರಿ, ಸ್ಮಶಾನವಾಸಿ, ಪ್ರೇತ ಗಣಗಳಿಗೆ ನಾಯಕ. ಅಂಥವನು ಈ ಯಜ್ಞಕ್ಕೆ ಬರಲು ಅರ್ಹನಲ್ಲ" ಎಂದನು.

ಈ ಶಿವದೂಷಣೆಯನ್ನು ಕೇಳಿ ದಧೀಚಿ "ಎಲೋ ದಕ್ಷಾ, ಈ ಯಾಗವು ನೆರವೇರಲಾರದು. ಶಿವನನ್ನು ಕರೆಯದೆ ಈ ಯಾಗ ಕಾರ್ಯಕ್ಕೆ ತಲೆ ಹಾಕಿದ ನೀನು ಅಪತ್ತನ್ನೂ, ವಿನಾಶವನ್ನೂ ತಂದುಕೊಳ್ಳುತ್ತಿರುವಿ. ಈ ಯಾಗಕ್ಕೆ ಬಂದವರು ಕೂಡಾ ಕಡೆಗೆ ದುಃಖಭಾಜನರಾಗುತ್ತಾರೆ" ಎಂದನು. ಅದು ನಿಜವೆಂದು ಹೇಳಿ ವಾಮದೇವ, ಮರೀಚಿ, ಗೌತಮ, ಶಿಲಾದ ಮೊದಲಾದ ಅನೇಕ ಮುನಿ ಋಷಿಗಳೊಂದಿಗೆ ದಧೀಚಿಯೂ ಸಭೆಯಿಂದ ಹೊರಟುಹೋದನು.

ಹಾಗೆ ಹೊರಟುಹೋಗುವವರನ್ನು ನೋಡಿ ದಕ್ಷನು, ಸಭೆಯಲ್ಲಿರುವವರೊಂದಿಗೆ, "ಹೋಗುವವರೆಲ್ಲ ಸದಾಚಾರವಿಲ್ಲದ ಪಾಷಂಡರು. ಅಂಥವರು ಹೊರಟುಹೋಗುವುದೇ ಒಳ್ಳೇದು. ಅದಕ್ಕಾಗಿ ನೀವೇನೂ ಚಿಂತಿಸದೆ, ನನ್ನ ಯಜ್ಞವನ್ನು ಪೂರ್ತಿಗೊಳಿಸಿಕೊಡಿರಿ" ಎಂದನು.

ಇಷ್ಟರೊಳಗೆ ಕೈಲಾಸದಲ್ಲಿ ಒಂದು ಸಂಗತಿ ನಡೆದುಕೊಂಡಿದ್ದಿತು. ಶಿವನೊಂದಿಗೆ ಸುಖವಾಗಿ ಸಂಸಾರ ಸಾಗಿಸಿಕೊಂಡಿದ್ದ ಸತೀದೇವಿ ಒಂದು ದಿನ ತನ್ನ ಗೆಳತಿಯರೊಂದಿಗೆ ಉದ್ಯಾನದಲ್ಲಿ ವಿಹರಿಸುತ್ತಿರುವಾಗ, ಆಕಾಶದಲ್ಲಿ ಅನೇಕ ವಿಮಾನಗಳು ಹೋಗುತ್ತಿರುವುದನ್ನು ನೋಡಿದಳು. ಆ ವಿಮಾನಗಳು ಎಲ್ಲಿಗೆ ಹೋಗುತ್ತವೆಂದು ತಿಳಿಯಲು ಸತೀದೇವಿ ತನ್ನ ಗೆಳತಿಯರನ್ನು ಕಳುಹಿಸಿದಳು. ಅವರು ತಿರುಗಿ ಬಂದು, ದಕ್ಷನು ಮಾಡುವ ಮಹಾ ಯಜ್ಞ ಸಮಾರಂಭಕ್ಕೆ ಅವರೆಲ್ಲಾ ಹೋಗುತ್ತಿರುವ ಸಮಾಚಾರವನ್ನು ಹೇಳಿದರು.

ಅದನ್ನು ಕೇಳಿ ಸತೀದೇವಿಗೆ ತಾನು ಕೂಡಾ ತನ್ನ ತಂದೆ ಮಾಡುವ ಯಜ್ಞ ಸಮಾರಂಭಕ್ಕೆ ಗಂಡನೊಂದಿಗೆ ಕೂಡಿ ಹೋಗಬೇಕೆಂಬ ಆಸೆ ಉಂಟಾಯಿತು.

ಅವಳು ಬೇಗ ಬೇಗನೇ ಶಿವನ ಬಳಿಗೆ ಹೋಗಿ, "ನನ್ನ ತಂದೆ ದೊಡ್ಡ ರೀತಿಯಲ್ಲಿ ಯಜ್ಞಮಾಡುತ್ತಿದ್ದಾರಂತೆ, ದೇವತೆಗಳೆಲ್ಲಾ ಅಲ್ಲಿಗೆ ಹೋಗುತ್ತಿದ್ದಾರೆ. ನಾವು ಕೂಡಾ ನಮ್ಮ ರುದ್ರಗಣಗಳೊಂದಿಗೆ ಕೂಡಿ ಅಲ್ಲಿಗೆ ಹೋಗೋಣ, ಹೊರಡಿ" ಎಂದಳು.

ಅದನ್ನು ಕೇಳಿ ಶಿವನು, "ಸತೀ, ನಿನ್ನ ತಂದೆಗೆ ನಮ್ಮ ಮೇಲೆ ದ್ವೇಷವೆಂದು ನಿನಗೆ ಗೊತ್ತಿಲ್ಲವೆ? ಆದುದರಿಂದಲೇ ಆಹ್ವಾನ ಕಳಿಸಲಿಲ್ಲ. ನಮ್ಮನ್ನು ಕರೆಯದೆಯೇ ಯಜ್ಞ ಮಾಡುತ್ತಿದ್ದಾನೆ. ಕರೆಯದ ಮುತ್ತೈದೆತನಕ್ಕೆ ಹೋಗಲೇಬಾರದು. ಹಾಗೆ ಹೋದರೆ ನಮಗೆ ಅವಮಾನವೇ ನಡೆಯುತ್ತದೆ. ಆಮೇಲೆ ಬೇಡದ ಆಪದಗಳೂ ಬರುತ್ತವೆ. ಸುಮ್ಮನಿರು" ಎಂದನು ಶಿವ.

"ಹಾಗಿದ್ದರೆ ನೀವು ಬರಬೇಡಿ. ನಾನು ಒಬ್ಬಳೇ ಹೋಗುತ್ತೇನೆ. ನನ್ನವರು ನನ್ನನ್ನೇಕೆ ಅವಮಾನಿಸುತ್ತಾರೆ? ಹಾಗೂ ನನ್ನ ತಂದೆ ಏನಾದರೂ ಹೇಳಿದರೆ ನಾನು ತಕ್ಕ ಸಮಾಧಾನ ಹೇಳಿ ನಿಮಗೂ ಕರೆ ಕಳುಹಿಸುವ ಹಾಗೆ ಮಾಡುತ್ತೇನೆ. ನಂದೀಶ್ವರ ಮೊದಲಾದವರ ಸಹಾಯ ಕೊಟ್ಟು ನನ್ನನ್ನು ಕಳುಹಿಸಿ ಕೊಡಿರಿ." ಎಂದಳು ಸತೀದೇವಿ.

"ಸತೀದೇವೀ! ನಿನ್ನನ್ನು ಬಿಟ್ಟು ನಾನು ಕ್ಷಣ ಕಾಲವೂ ಇರಲಾರೆ, ನೀನು ನನ್ನನ್ನು ಬಿಟ್ಟು ನಿನ್ನ ತಂದೆ ಮಾಡುವ ಯಜ್ಞಕ್ಕೆ ಹೋಗಬೇಕೆಂದು ಹಟ ಹಿಡಿಯುವಿ. ಹೋದರೆ ನಿನಗೆ ತಪ್ಪದೆ ಅವಮಾನವಾಗುತ್ತದೆ. ದೊಡ್ಡ ಅಪಾಯ ಬರುತ್ತದೆ. ಬರಲಿರುವುದನ್ನು ಸ್ವಲ್ಪ ಆಲೋಚಿಸು." ಎಂದು ಶಿವನು ಸತೀದೇವಿಗೆ ಹೇಳಿದನು.

ಆದರೆ ಸತೀದೇವಿ ಶಿವನ ಮಾತಿನೊಳಗಿರುವ ನಿಜವನ್ನು ತಿಳಿಯಲಾಗದೆ ಹೋದಳು. ತನ್ನ ತಾಯಿ ತಂದೆಯರು ತನ್ನನ್ನು ಅವಮಾನಿಸುವರೆಂದು ಊಹಿಸಲಿಕ್ಕೂ ಅವಳಿಂದಾಗಲಿಲ್ಲ. ತಾಯಿಯನ್ನೂ ಸಹೋದರಿಯರನ್ನೂ ನೋಡಬೇಕೆಂಬ ಕುತೂಹಲದಲ್ಲಿ ಅವಳ ಆಲೋಚನೆ ಮುಚ್ಚಿಹೋಯಿತು. ಅವಳು ತೌರುಮನೆಗೆ ಹೋಗಲೇಬೇಕೆಂದು ಹಟ ಹಿಡಿದಳು.

ಹೇಗೆ ನಡೆಯಬೇಕೆಂದಿದೆಯೋ ಹಾಗೆಯೇ ನಡೆಯುತ್ತದೆಂದುಕೊಂಡು ಶಿವನು, ನಂದೀಶ್ವರನನ್ನೂ ರುದ್ರಗಣಗಳನ್ನೂ ಅವಳಿಗೆ ಸಹಾಯವಾಗಿ ಕೊಟ್ಟು, ಅವಳನ್ನು ದಕ್ಷಯಜ್ಞಕ್ಕೆ ಹೋಗಲು ಕಳುಹಿಸಿಕೊಟ್ಟನು.





# ಆತುರದ ಶಿಷ್ಯ

**ಒಂ**ದು ಕಾಲದಲ್ಲಿ ಮಹಾದೇವಶಾಸ್ತ್ರಿ ಎಂಬ ಪಂಡಿತನು ಗುರುಕುಲ ನಡೆಸಿಕೊಂಡಿದ್ದನು. ಅವನ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಿಕೊಂಡಿದ್ದ ವೃಷಭನೆಂಬ ಶಿಷ್ಯನು ಪ್ರತಿ ವಿಷಯದಲ್ಲಿಯೂ ಆತುರವನ್ನು ವ್ಯಕ್ತಪಡಿಸುತ್ತಿದ್ದನು. ಸಾಧ್ಯವಾದರೆ ಒಂದೇ ದಿನದಲ್ಲಿ ಸಕಲ ಶಾಸ್ತ್ರಗಳನ್ನೂ ಕಲಿತುಕೊಂಡು, ಸಹಾಧ್ಯಾಯಿಗಳೆಲ್ಲರನ್ನೂ ಮೀರಿಸಿಬಿಡಬೇಕೆಂಬಷ್ಟು ಆತುರ ಅವನಿಗೆ.

ಗುರುವಿನ ಮನೆಯ ಅಟ್ಟದಲ್ಲಿ ಕೆಲವು ಪುರಾತನ ಕಾಲದ ತಾಲಗ್ರಂಥಗಳಿದ್ದುವು. ಅವು ಯಾವುದೋ ರಹಸ್ಯ ಮಂತ್ರ ಶಾಸ್ತ್ರದ ಗ್ರಂಥಗಳೆಂದು ಎಲ್ಲರೂ ಅಂದುಕೊಳ್ಳುತ್ತಿದ್ದರು. ಅವುಗಳನ್ನು ನೋಡಬೇಕೆಂದು ವೃಷಭನಿಗೆ ಕುತೂಹಲವಾಗುತ್ತಿದ್ದಿತು. ಆದರೆ ಗುರುಗಳು ಅದರ ಗೋಜಿ ಈಗ ಬೇಡವೆಂದು ಹೇಳಿಬಿಟ್ಟುದರಿಂದ, ಯಾವ ಶಿಷ್ಯರೂ ಅವುಗಳ ಪ್ರಸ್ತಾಪ ಎತ್ತುತ್ತಿರಲಿಲ್ಲ. ಆತುರಗಾರನಾದ ವೃಷಭನಿಗೆ ಮಾತ್ರ ಅವುಗಳನ್ನು ಹೇಗಾದರೂ ಓದಿಬಿಡಬೇಕೆಂದು ಅತ್ಯಂತ ಆತುರಪಟ್ಟುಕೊಂಡಿದ್ದನು.

ಒಂದುಸಾರಿ ಮಹಾದೇವಶಾಸ್ತ್ರಿಗೆ ರಾಜಧಾನಿಯಲ್ಲಿ ಮುಖ್ಯವಾದೊಂದು ಕೆಲಸ ಬಂದಿತು. ಒಂದುವಾರದ ಮೇಲೆ ಹಿಂದಿರುಗಿ ಬರುವುದಾಗಿ ಶಿಷ್ಯರಿಗೆ ಹೇಳಿ, ಹೊರಟುಹೋದನು. ವೃಷಭನಿಗೆ ಇದೊಂದು ಒಳ್ಳೇ ಸಂದರ್ಭವೆನಿಸಿತು.

ಆ ದಿನ ರಾತ್ರಿ ಸಹಾಧ್ಯಾಯಿಗಳೆಲ್ಲಾ ಗಾಢ ನಿದ್ರೆಯಲ್ಲಿರುವಾಗ ವೃಷಭನು ನಿಃಶಬ್ದವಾಗಿ ಅಟ್ಟದ ಮೇಲೆ ಹತ್ತಿ, ಒಂದು ತಾಲಪತ್ರ ಗ್ರಂಥವನ್ನು ತೆಗೆದು ದೀಪದ ಬೆಳಕಿನಲ್ಲಿ ಹಿಡಿದು ಓದಿದನು. ಅದರಲ್ಲಿದ್ದ ಒಂದು ಮಂತ್ರವನ್ನು ಜಪಿಸಿದರೆ ಮನುಷ್ಯನು ನೆನೆದುಕೊಳ್ಳುವ ರೂಪವನ್ನು ಪಡೆಯಬಹುದಾಗಿತ್ತು. ವೃಷಭನು ಆ ಮಂತ್ರವನ್ನು ಒಂದಕ್ಕೆ ನಾಲ್ಕುಸಾರಿ ಓದಿ ಕಂಠಸ್ಥ ಮಾಡಿಕೊಂಡನು. ಅದರ ಸಿದ್ಧಿಗೆ ದಿನಾ ಬೆಳಿಗ್ಗೆ ಮಾಡಬೇಕಾದ ಕ್ರಮವನ್ನೂ ಓದಿ ತಿಳಿದುಕೊಂಡು, ಗ್ರಂಥವನ್ನು ಅಲ್ಲೇ ಇಟ್ಟು ಅತ್ಯುತ್ಸಾಹದಿಂದ ಅಟ್ಟದಿಂದಿಳಿದನು.

ತಾನು ಈಗ ಇತರ ಎಲ್ಲಾ ಶಿಷ್ಯರಿಗಿಂತಲೂ ಹೆಚ್ಚಿನವನಾದೆನೆಂದು ಒಳಗೊಳಗೇ ಉಬ್ಬಿಕೊಳ್ಳು

ಜಿ. ಸಾಂಬ



ತ್ತಿದ್ದನು ವೃಷಭ. ಸಂತೋಷದಿಂದ ಬೆಳತನಕ ಮತ್ತೆ ಅವನಿಗೆ ನಿದ್ದೆಯೇ ಬರಲಿಲ್ಲ.

ಮರುದಿನ ಶಿಷ್ಯರೆಲ್ಲರೂ ಸಮಿಧೆಗಳನ್ನೂ, ಗಡ್ಡೆ ಗೆಣಸು ಊಟದೆಲೆಗಳನ್ನೂ ತರಲು ಅಡವಿಗೆ ಹೋದರು. ಆಗ ಅವರು ಅದೂ ಇದೂ ಮಾತಾಡಿಕೊಳ್ಳುತ್ತಿರುವಾಗ, ವೃಷಭನು ತನ್ನ ಹೆಚ್ಚಳಿಕೆಯನ್ನು ಮುಚ್ಚಿಟ್ಟುಕೊಳ್ಳಲಾಗದೆ, ತನಗೊಂದು ಅದ್ಭುತವಾದ ಮಂತ್ರವು ಗೊತ್ತಿದೆಯೆಂದು, ಜತೆಗಾರರೊಂದಿಗೆ ಹೇಳಿಕೊಂಡನು. ಅವರು ಅವನ ಮಾತನ್ನು ನಂಬದೆ, ಏಗತಾಳಿಯಾಗಿ ನೆಗಾಡಿದರು.

ಅದರಿಂದ ವೃಷಭನು ಸವಾಲಿಗೆ ಬಿದ್ದು, "ಬೇಕಾದರೆ ನಾನು ಈಗಿಂದೀಗಲೇ ಮಂತ್ರ ಜಪಿಸಿ ಯಾವ ರೂಪವನ್ನಾದರೂ ತಂದುಕೊಂಡೇನು!" ಎಂದನು.

"ನಿನ್ನ ಹೆಸರೇ ವೃಷಭ. ಹೆಸರಿಗೆ ತಕ್ಕಹಾಗೆ ವೃಷಭ ಅಂದರೆ ಎತ್ತಿನ ರೂಪ ತಾಳು ನೋಡುವಾ!" ಎಂದನೊಬ್ಬನು ನಗುತ್ತ.

ವೃಷಭನು ಕೂಡಲೇ ಮಂತ್ರವನ್ನು ಜಪಿಸಿ, ಒಂದು ಎತ್ತಿನ ರೂಪ ತಾಳಿ ನಿಂತನು. ಅದನ್ನು ನೋಡಿ ಶಿಷ್ಯರೆಲ್ಲಾ ಅತ್ಯಾಶ್ಚರ್ಯದಿಂದ ಮೂಕರಾಗಿ ದೊಡ್ಡ ಕಣ್ಣುಗಳನ್ನು ಮಾಡಿಕೊಂಡು ನಿಂತರು.

ಆಗ ಸ್ವಲ್ಪ ದೂರದಲ್ಲಿ ಹುಲಿಯೊಂದು ಗಾಂಡ್ರಿಸಿದ ಶಬ್ದ ಕೇಳಿಸಿತು. ಮರು ಕ್ಷಣದಲ್ಲಿ ಕೆಲವು ಪ್ರಾಣಿಗಳೂ ಅವರ ಪಕ್ಕದಿಂದಾಗಿ ಓಡಿಕೊಂಡು ಹೋಗ ತೊಡಗಿದವು. ಶಿಷ್ಯರೆಲ್ಲಾ ಸಮೀಪದಲ್ಲಿದ್ದ ಮರಗಳ ಮೇಲೆ ಏರಿಕೊಂಡರು. ಎತ್ತಿನ ರೂಪದಲ್ಲಿದ್ದ ವೃಷಭನಿಗೆ ಆಗ ತಾನು ಮಾಡಿದ ತಪ್ಪು ಎಷ್ಟು ದೊಡ್ಡದೆಂದು ಗೊತ್ತಾಯಿತು. ಅವನಿಗೆ ಮಂತ್ರ ಜಪಿಸಿ ಏನೋ ಒಂದು ರೂಪ ತಂದುಕೊಳ್ಳಲಿಕ್ಕಷ್ಟೇ ಗೊತ್ತಿತ್ತು. ಮತ್ತೆ ನಿಜರೂಪ ಪಡೆಯುವ ಪರಿಹಾರದ ಮಂತ್ರ ಯಾವುದೆಂದು ಹುಡುಕುವ ಗೋಜಿಗೆ ಅವನು ಹೋಗಿರಲಿಲ್ಲ. "ಆತುರಗಾರನಿಗೆ ಬುದ್ಧಿಮಟ್ಟು" ತಾನೇ?

ಅವನು ತಾನೇನು ಮಾಡಬೇಕೆಂದು ಆಲೋಚಿಸುತ್ತಿದ್ದಾಗಲೇ ಹೆಬ್ಬುಲಿಯೊಂದು ಆಕಡೆಗೆ ಬಂದೇ ಬಂದಿತು, ಅದನ್ನು ನೋಡಿದ ಕೂಡಲೇ ವೃಷಭನು ಹಾರಿ ತಿರುಗಿ ಬಾಲವೆತ್ತಿಕೊಂಡು, ಕಂಡಕಂಡ ಹಾಗೆ ಓಡಿ, ಕಾಡು ದಾಟಿ ಯಾವುದೋ ಒಂದು ಗ್ರಾಮವನ್ನು ಮುಟ್ಟಿದನು.

ಅಷ್ಟು ಹೊತ್ತಿಗೆ ಊಟದ ವೇಳೆಯಾಗಿತ್ತು. ಬಹಳ ದೂರ ಓಡಿದುದರಿಂದ ವೃಷಭನಿಗೆ ವಿಪರೀತ ಹಸಿವೆ. ಎತ್ತಿನ ರೂಪದಲ್ಲಿರುವ ಅವನಿಗೆ ಮನುಷ್ಯರ ಭೋಜನ ಕೊಡುವವರಾರು? ಹಸಿವೆಯನ್ನು ನಿವಾರಿಸಿಕೊಳ್ಳುವುದು ಹೇಗೆ? ಅವನಿಗೆ ದೊಡ್ಡ ಚಿಂತೆ ಹಿಡಿಯಿತು.

ಇಷ್ಟವಿಲ್ಲದಿದ್ದರೂ ಉಪಾಯವಿಲ್ಲದೆ, ಸಮೀಪದಲ್ಲಿದ್ದ ಜೋಳದ ಹೊಲಕ್ಕೆ ಹೋಗಿ ಗಬಗಬನೆ

ಮೇಯಲು ಪ್ರಾರಂಭಿಸಿದನು. ಅಷ್ಟರಲ್ಲಿ ವೃಷಭನನ್ನು ನೋಡಿದ ಕಾವಲುಗಾರನು ಓಡುತ್ತಾ ಬಂದು, ಅವನ ಬೆನ್ನಿನ ಮೇಲೂ ಪಕ್ಕೆಗಳ ಮೇಲೂ ಬಲವಾಗಿ ಬಾರಿಸ ತೊಡಗಿದನು. ವೃಷಭನು ನೋವಿನಿಂದ ಕೂಗುತ್ತಾ, ಗ್ರಾಮದೊಳಗೆ ಓಡಿದನು.

ಅವನ ಕಷ್ಟಗಳು ಅಷ್ಟಕ್ಕೆ ಮುಗಿಯಲಿಲ್ಲ. ಗ್ರಾಮದ ಬೀದಿಯಲ್ಲಿ ಅವನು ಎಡತಾಕಿಕೊಂಡಿದ್ದಾಗ, ಪರ್ವತದಂತಿದ್ದ ಒಂದು ಗೂಳಿ ಎತ್ತು ಅವನಿಗೆ ಇದಿರಾಯಿತು. ಅದನ್ನು ನೋಡಿದ ಕೂಡಲೇ ಅವನು ಹಿಂದಿರುಗಿ ಓಡ ತೊಡಗಿದನು. ಆದರೆ ಗೂಳಿ ಭೀಕರವಾಗಿ ರಂಕೆ ಗುಟ್ಟಿಕೊಂಡು ಮುಂಗಾಲು ಕೆರೆದು ಅವನಿಗಿಂತ ವೇಗವಾಗಿ ಓಡಿ ಬಂದು, ಇದಿರು ನಿಂತು ಒಮ್ಮೆಗೇ ಬಲವಾದ ಕೊಂಬುಗಳಿಂದ ಹಾಯ ತೊಡಗಿತು.

ವೃಷಭನು ಆ ಹೆಗ್ಗೂಳಿಯ ಹೊಡೆತದಿಂದ ತಪ್ಪಿಸಿಕೊಳ್ಳಲು ಸಂದುಗೊಂದುಗಳಿಗೆ ಓಡಿ ಸ್ವಲ್ಪ ಹೊತ್ತಿನ ಮೇಲೆ ಅದರ ಕಣ್ಣಿಗೆ ಮರೆಯಾಗಿ ಹೋಗುವಾಗ ಸಾಕು ಸಾಕಾಯಿತು.

ಭಯ ನಿವಾರಣೆಯಾದ ಮೇಲೆ ಒಂದು ಮರದ ನೆರಳಿನಲ್ಲಿ ನಿಂತುಕೊಂಡು ದಣಿವಾರಿಸಿಕೊಳ್ಳುತ್ತಿರುವಾಗ, ಅವನನ್ನು ಪಶುಗಳ ವ್ಯಾಪಾರ ಮಾಡುವ ಕೂರ್ಮಯ್ಯನು ನೋಡಿದನು. ಅದನ್ನು ನೋಡಿದ ಕೂಡಲೇ ಇದು ತಮ್ಮ ಗ್ರಾಮದ ಎತ್ತು ಅಲ್ಲವೆಂದೂ, ಎಲ್ಲಿಂದಲೋ ತಪ್ಪಿಸಿಕೊಂಡು ಬಂದಿರುವುದೆಂದೂ ಅಂದುಕೊಂಡನು.

ಕೂರ್ಮಯ್ಯನು ವೃಷಭನನ್ನು ಸಮೀಪಿಸಿ, ಕೈಯಲ್ಲಿದ್ದ ಕೋಲಿನಿಂದ ಬೆದರಿಸುತ್ತಾ, ಪ್ರೀತಿಯಿಂದ ತಟ್ಟುತ್ತಾ ಮೆಲ್ಲ ಮೆಲ್ಲನೆ ತನ್ನ ಹಟ್ಟಿಗೆ ಕರೆದುಕೊಂಡು ಹೋಗಿ, ಒಂದು ಗೂಟಕ್ಕೆ ಕಟ್ಟಿಹಾಕಿದನು.

ಹಗಲು ಹೋಗಿ ರಾತ್ರಿಯಾಯಿತು. ವೃಷಭನು ಹಸಿವಿನ ಬಾಧೆ ತಾಳಲಾಗದೆ, ಕೂರ್ಮಯ್ಯನು ಒಡ್ಡಿದ ಉಳಿದ ಪಶುಗಳ ಆಹಾರಗಳನ್ನೇ ತಿನ್ನ



ಬೇಕಾಗಿ ಬಂತು. ಅವನಿಗೆ ಈ ಎತ್ತಿನ ಬದುಕು ನರಕಪ್ರಾಯವಾಗಿ ತೋರಿತು.

ಮರುದಿನ ಕೂರ್ಮಯ್ಯ ತನ್ನದೊಂದು ಎತ್ತಿನ ಜತೆಯಲ್ಲಿ ವೃಷಭನನ್ನು ಕೂಡಾ ಗಾಡಿಗೆ ಜೋಡಿಸಿ ಕಟ್ಟಿ ನೊಗವನ್ನು ಹೆಗಲಿಗಿಟ್ಟನು. ವೃಷಭನಿಗೆ ಜತೆ ಎತ್ತಿನೊಂದಿಗೆ ಸರಿಸಮನಾಗಿ ಕಾಲುಗಳನ್ನೆತ್ತಿ ನಡೆಯಲು ಸಾಧ್ಯವಾಗಲಿಲ್ಲ. ಕೂರ್ಮಯ್ಯ ನಾಲ್ಕು ದಿನಗಳವರೆಗೆ ಸಹನೆಯಿಂದ ಆ ಹೊಸ ಎತ್ತಿಗೆ ಗಾಡಿ ಎಳೆಯಲು ಪಳಗಿಸಬೇಕೆಂದು ನೋಡಿದನು. ಆದರೆ ಪ್ರಯೋಜನವಾಗಲಿಲ್ಲ. ಆದರಿಂದ ಬೇಸತ್ತ ಕೂರ್ಮಯ್ಯನು ವೃಷಭನನ್ನು ಗಂಗೆತ್ತಿನವರಿಗೆ ಮಾರಲು ನೋಡಿದನು.

ಗಂಗೆತ್ತಿನವರು ವೃಷಭನನ್ನು ನೋಡಿ ತೃಪ್ತರಾಗಿ ವ್ಯಾಪಾರ ಕುದುರಿಸಿಕೊಂಡು, ಮರುದಿನ ಬಂದು ಎತ್ತಿನ ಮೂಗಿಗೆ ಹಗ್ಗಹಾಕಿ ಕರೆದುಕೊಂಡು ಹೋಗುತ್ತೇವೆಂದು ಕೂರ್ಮಯ್ಯನೊಡನೆ ಹೇಳಿ ಹೋದರು.

ಮೂಗಿನ ಹಗ್ಗದ ಮಾತು ಕೇಳಿದ ಕೂಡಲೇ ವೃಷಭನು ಭಯದಿಂದ ಕಂಪಿಸಿದನು. ಹಿಂದೆ ಅವನು ಗಂಗೆತ್ತಿನವರು ಎತ್ತುಗಳಿಗೆ ದೊಡ್ಡ ದಬ್ಬಣ ದಿಂದ ಮೂಗಿಗೆ ರಂಧ್ರಮಾಡಿ ಹಗ್ಗ ಹಾಕುವುದನ್ನು ನೋಡಿದ್ದನು. ಆ ಸಮಯದಲ್ಲಿ ಎತ್ತುಗಳು ಪಡುವ ಯಾತನೆಯನ್ನೂ ಒದರಾಟವನ್ನೂ ಕಂಡಿದ್ದನು. ಆ ದಿನ ರಾತ್ರಿ ಅವನು ಇದ್ದ ಬಲವನ್ನೆಲ್ಲಾ ಉಪಯೋಗಿಸಿ ಕಟ್ಟಿದ ಹಗ್ಗವನ್ನು ಕಡಿದುಕೊಂಡು, ರಾತ್ರಿ ಪೂರಾ ಓಡಿ, ಬೆಳಗಾಗುವಾಗ ತನ್ನ ಗುರು ಕುಲವಿರುವ ದಿಕ್ಕು ತಿಳಿದು ಹೇಗೋ ಅಲ್ಲಿಗೆ ಬಂದು ಸೇರಿದನು.

ಅಷ್ಟುಹೊತ್ತಿಗೆ ಮಹಾದೇವಶಾಸ್ತ್ರಿ ರಾಜಧಾನಿ ಯಿಂದ ಹಿಂದಿರುಗಿ ಬಂದಿದ್ದನು. ಶಿಷ್ಯರು ಅವ ನೊಂದಿಗೆ ಅಡವಿಯಲ್ಲಿ ನಡೆದ ವೃಷಭನ ಸಂಗತಿ ಯನ್ನೆಲ್ಲಾ ಹೇಳಿದರು. ಎತ್ತಿನ ರೂಪದಲ್ಲಿ ಕಣ್ಣೀರು ಸುರಿಸುತ್ತ ವೃಷಭನು ಗುರುವಿನ ಮುಂದೆ ಬಂದನು. ಗುರುವಿಗೆ ಅವನ ಮೇಲೆ ಎಲ್ಲಿಲ್ಲದಷ್ಟು ಕರುಣೆ ಯುಂಟಾಯಿತು. ಯಾವುದೋ ಮಂತ್ರವನ್ನು ಪಠಿಸಿ ಶಿಷ್ಯನಿಗೆ ನಿಜರೂಪ ಬರುವ ಹಾಗೆ ಮಾಡಿದನು.

ವೃಷಭನು ಗಳಗಳನೆ ಅಳುತ್ತ, ಗುರುವಿನ ಪಾದ ಗಳ ಮೇಲೆ ಬಿದ್ದು, ಎತ್ತಿನ ರೂಪದಲ್ಲಿ ತಾನು ಪಟ್ಟ ಬವಣೆಗಳನ್ನೆಲ್ಲಾ ಗೋಗರೆದುಕೊಂಡನು.

ಆಮೇಲೆ ಅವನು ಆತುರಪಡುವುದನ್ನು ಬಿಟ್ಟನು. ಮಂತ್ರಶಾಸ್ತ್ರದ ಗೊಡವೆಗೇ ಹೋಗಲಿಲ್ಲ. ನಿಗ್ರಹ ಶಕ್ತಿಯನ್ನು ಬೆಳೆಸಿಕೊಳ್ಳುತ್ತ, ವಿದ್ಯಾರ್ಜನೆಯನ್ನು ಮಾಡಿದನು.



**ಪಕ್ಷಿಗಳು-ಪ್ರಾಣಿಗಳು**

# ನವಿಲು

ಪಿಂಛವನ್ನು ಬಿಡಿಸಿಕೊಂಡ ನವಿಲಿನದು ಒಂದು ಅದ್ಭುತ ದೃಶ್ಯ. ನೀಲ, ಪಚ್ಚೆ, ಬಂಗಾರದ ರಂಗುಗಳಿಂದ ರಂಜಿಸುವ ಗಂಡು ನವಿಲಿನ ದೃಶ್ಯ ನೋಡುವವರನ್ನು ಪರವಶಗೊಳಿಸುತ್ತದೆ. ಆದರೆ ನವಿಲಿನ ಕಂಠಸ್ವರವು ಕಠೋರವಾಗಿರುತ್ತದೆ.

ಪ್ರಾಚೀನ ಕಾಲದಿಂದಲೂ ನಮ್ಮ ದೇಶದಲ್ಲಿ ಮಾತ್ರವಲ್ಲದೆ ಗ್ರೀಕು, ಚೀನಾ ಮೊದಲಾದ ದೇಶಗಳಲ್ಲಿಯೂ ನವಿಲಿನ ಪಿಂಛವನ್ನು ವಿಶೇಷವಾಗಿ ಅಭಿಮಾನಿಸಿ ಅಲಂಕಾರಗಳಿಗೆ ಉಪಯೋಗಿಸುತ್ತಿದ್ದರು. ಆರ್ಗಾನ್ ರಾಜಕುಮಾರಿಯನ್ನು ಸಂರಕ್ಷಿಸಲು ಹೀರಾದೇವತೆ ಸಾವಿರ ಕಣ್ಣುಗಳ ನವಿಲನ್ನು ನಿಯೋಗಿಸಿದಂತೆ ಪ್ರಾಚೀನ ಗ್ರೀಕರು ಭಾವಿಸುತ್ತಿದ್ದರು.. ಆದುದರಿಂದಲೇ ಅವರು ನವಿಲನ್ನು ಹೀರಾಪಕ್ಷಿ ಎನ್ನುವರು. ಚೈನಾದಲ್ಲಿ ರಾಜರು ಅಧಿಕಾರಿಗಳನ್ನು ಸತ್ಕರಿಸಲು ನವಿಲು ಗರಿಯನ್ನು ಬಹುಮಾನಿಸುತ್ತಿದ್ದರು.

ಬಂಗಾರ ಹಾಗು ಅಪೂರ್ವ ಮಣಿಗಳಿಂದ ನಿರ್ಮಿಸಲ್ಪಟ್ಟ ಮೊಗಲರ ಕಾಲದ ಮಯೂರ ಸಿಂಹಾಸನವು ಜಗತ್ಪ್ರಸಿದ್ಧವಾದುದು.

ಐರೋಪಾ ಖಂಡದಲ್ಲಿ ಬಹಳ ಕಾಲದಿಂದ ಉದ್ಯಾನವನಗಳ ಅಲಂಕಾರವಾಗಿ ನವಿಲುಗಳನ್ನು ಬೆಳೆಸುತ್ತಿರುವರು. ಆದರೆ ನವಿಲಿನ ಸ್ವಸ್ಥಳವು ಭಾರತ ದೇಶ ಮತ್ತು ಶ್ರೀಲಂಕಾ.

ನೆಲದ ಮೇಲೆಯೂ, ನೆಲಕ್ಕೆ ಹತ್ತಿರವಾದ ಕೊಂಬೆಗಳ ಮೇಲೆಯೂ ನವಿಲುಗಳು ಗೂಡು ಕಟ್ಟುತ್ತವೆ. ಹೆಣ್ಣು ನವಿಲು ಆರು ಮೊಟ್ಟೆಗಳನ್ನಿಡುತ್ತದೆ. ಎರಡು ವರ್ಷ ತುಂಬುವವರೆಗೆ ಹೆಣ್ಣು ನವಿಲಿಗೂ ಗಂಡು ನವಿಲಿಗೂ ವ್ಯತ್ಯಾಸ ತಿಳಿಯಲಾರದು. ಆಮೇಲೆ ಗಂಡು ನವಿಲುಗಳಿಗೆ ಅಂದವಾದ ಪಿಂಛವು ಬೆಳೆಯುತ್ತದೆ, ಕೊಂಬೆಗಳ ಮೇಲೆ ಬಾಲ ಬಿಚ್ಚಿ ನಿಲ್ಲುವ ನವಿಲುಗಿಂತಲೂ, ಹಾರಾಡುವ ನವಿಲು ಇನ್ನಷ್ಟು ಅಂದವಾಗಿ ಕಾಣುತ್ತದೆ. ನವಿಲು ನಮ್ಮ ರಾಷ್ಟ್ರೀಯ ಪಕ್ಷಿ.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೩ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



M. Natarajan



M. Natarajan

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಫೆಬ್ರುವರಿ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಡಿಸೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ದೊಡ್ಡವನ ದಡ್ಡತನದ ಪರಮಾವಧಿ

ಎರಡನೇ ಫೋಟೋ : ಚಿಕ್ಕವಳ ಮುನ್ನೆಚ್ಚರಿಕೆಯ ಬುದ್ಧಿ

ಕಳುಹಿಸಿದವರು : ಸಿ. ಆಶಾ, ಹೋಟೆಲ್ ಎನ್. ಟಿ. ಆರ್., ತುಮಕೂರು

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಸಾನ್‌ಫ್ರಾನ್ಸಿಸ್ಕೋ ನಗರದಲ್ಲಿ. ೧೯೪೫ ನೇ ಸಂ. ಮಾರ್ಚಿ ೨೫. ೨. ಪೆಷಾವರ್. ೩. ಪಲ್ಲವರು. ೪. ರಾಜಾ ಢಿಲೂ. ೫. ಆಗ್ರಾ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor : NAGI REDDI.




# "ಆರು ಪ್ಯಾಕೆಟ್ ಆಗುವುದು ಏಳು. ನಾಲ್ಕು ಪ್ಯಾಕೆಟ್ ಆಗುವುದು ಒಂಬತ್ತು"

## ಇದು ಬಿಸ್ಕತ್ತುಗಳ ಕೊಡುಗೆಗಳಲ್ಲೇ ಅತ್ಯಂತ ಹೆಚ್ಚಿನದು!

ಹೌದು. ಈಗ ಕ್ವಾಲಿಟಿ ಬಿಸ್ಕತ್ತುಗಳಿಗೆ ಬಾಯಿಸ್ಟ್ ನೀಡಲಿರುವ ರುಚಿಯ ಜೊತೆಗೆ ನಾವು ಹೆಚ್ಚಿನ ಮಹತ್ವ ಒಂದಿದೆ. . ನೀವು ಕೊಳ್ಳುವ ಬಿಸ್ಕತ್ ಪ್ಯಾಕೆಟ್‌ಗಳ ರ್ಯಾಪರ್‌ಗಳನ್ನು ಸೂಕ್ಷ್ಮವಾಗಿ ಗಮನಿಸಿ. ಒಳಗಿನ ಪ್ಯಾಕ್, ಕಾಗದವನ್ನು ತೆಗೆದಾಗ ಅವರಲ್ಲಿ ನಮ್ಮ ಕ್ವಾಲಿಟಿ ಚಿಣ್ಣಿಯ ಕೆಲವು ಭಾಗವನ್ನು ಮುದ್ರಿಸಿರುವುದನ್ನು ಕಾಣುವಿರಿ. ಕೆಲವು ರ್ಯಾಪರ್‌ಗಳಲ್ಲಿ ಟೋಪಿಯ ಭಾಗವಿದ್ದರೆ ಇನ್ನೂ ಕೆಲವು ರ್ಯಾಪರ್‌ಗಳಲ್ಲಿ ಮುಖದ ಹೊರರೇಖೆ, ಕಣ್ಣುಗಳು, ಮೂಗು, ಬಾಯಿ ಇತ್ಯಾದಿ ವಿವರಗಳಿರುತ್ತವೆ. ಕೆಲವು ರ್ಯಾಪರ್‌ಗಳಲ್ಲಿ ಕೊರಳ ಪಟ್ಟಿ ಇರುತ್ತವೆ. ಅವುಗಳಿಗೆ ಈ ಕೆಳಗಿನಂತೆ ಅಂಕೆಗಳನ್ನು ನೀಡಲಾಗಿದೆ.

ಈ ನಾಲ್ಕು ಅಂಗಗಳು ಒಟ್ಟಿಗೆ ಸೇರಿ ನಮ್ಮ ಕ್ವಾಲಿಟಿ ಚಿಣ್ಣ ಆಗುತ್ತದೆ.





1, 2, 3, ಮತ್ತು 4 ನ್ನು ಸಂಗ್ರಹಿಸಿರಿ – ಐದು ಪ್ಯಾಕೆಟ್ ಉಚಿತ!
1, 2, ಮತ್ತು 3 ನ್ನು ಸಂಗ್ರಹಿಸಿ – ಒಂದು ಪ್ಯಾಕೆಟ್ ಉಚಿತ!
2, 3, ಮತ್ತು 4 ನ್ನು ಸಂಗ್ರಹಿಸಿ – ಒಂದು ಪ್ಯಾಕೆಟ್ ಉಚಿತ!
ಅಷ್ಟು ಮಾತ್ರವಲ್ಲ, ರ್ಯಾಪರ್‌ಗಳಲ್ಲಿ ಚಿತ್ರಗಳಿರಲಿ ಅಥವಾ ಇಲ್ಲದಿರಲಿ, ಯಾವುದೇ ಆರು ರ್ಯಾಪರ್‌ಗಳನ್ನು ನೀಡಿ ಒಂದು ಕ್ವಾಲಿಟಿ ಗ್ಲೂಕೋಸ್ ಬಿಸ್ಕತ್ ಪ್ಯಾಕೆಟನ್ನು ಉಚಿತವಾಗಿ ಪಡೆಯಬಹುದು.



ನಿಮ್ಮ ಸಮೀಪದ ಚಿಲ್ಲರೆ ಮಾರಾಟಗಾರರಲ್ಲಿ ಪ್ಯಾಕೆಟ್‌ಗಳ ರ್ಯಾಪರ್‌ಗಳನ್ನು ನೀಡಿ ಬಿಸ್ಕತ್ ಪ್ಯಾಕೆಟ್‌ಗಳನ್ನು ಉಚಿತವಾಗಿ ಪಡೆಯಿರಿ. ದಯಮಾಡಿ ಗಮನಿಸಿ. ಈ ಯೋಜನೆಯು ಕರ್ನಾಟಕ, ತಮಿಳುನಾಡು, ಪಾಂಡಿಚೇರಿ, ಕೇರಳ ರಾಜ್ಯಗಳಲ್ಲಿ ಮತ್ತು ಮಹಾರಾಷ್ಟ್ರ ಮತ್ತು ಗೋವಾ ರಾಜ್ಯಗಳ ಕೆಲವು ಪ್ರದೇಶಗಳಲ್ಲಿ ಮಾತ್ರ ಚಾಲ್ತಿಯಲ್ಲಿ ಇರುತ್ತದೆ.






ಕ್ವಾಲಿಟಿ
ಬಿಸ್ಕಟ್ಸ್ ಪ್ರೈ. ಲಿ.
ಬೆಂಗಳೂರು-560 039.

CLARION K B 84259